ಮೋಕ್ಷಮಾರ್ಗಪ್ರದೀಪ—



ಶ್ರೀ. ಧರ್ಮನಿಷ್ಠ ಉಗರಚಂದ ಅಮಥಾಲಾಲರು
ನರಸೀಪುರ.

# ಗ್ರಂಥಕರ್ತರ ಪರಿಚಯ.



ಪೂಜ್ಯಪಾದ ಆಚಾರ್ಯ ಕುಂಥುಸಾಗರ ಸ್ವಾಮಿಗಳು ಪರಮ ಪ್ರಭಾವಕರಾದ ವಿದ್ವಾನ್ ತಪಸ್ವಿಗಳು. ಇವರ ಜನ್ಮಸ್ಥಾನವು ಕರ್ನಾಟಕ ಪ್ರಾಂತದ ಬೆಳಗಾಂವ ಜಿಲ್ಲೆಯಲ್ಲಿ ಐನಾಪುರವೆಂಬ ಗ್ರಾಮವು. ಅಲ್ಲಿ ಉತ್ತಮ ಕುಲದಲ್ಲಿ ಸಾತಪ್ಪಾ ಮತ್ತು ಸರಸ್ವತಿಯ ಸುಪುತ್ರರಾದ ರಾಮ ಚಂದ್ರರೆಂದು ಇವರು ಪೂರ್ವಾಶ್ರಮದಲ್ಲಿ ಹೇಳಲ್ಪಡುತ್ತಿದ್ದರು. ಬಾಲ್ಯಾವಸ್ಥೆಯಿಂದಲೇ ರಾಮಚಂದ್ರರು ಸಂಸಾರದಿಂದ ಭಯಭೀತರಾಗಿದ್ದರು, ತಾಯಿ ತಂದೆಗಳ ಆಜ್ಞಾಲೋಪದ ಭಯದಿಂದ ಗೃಹಸ್ಥಾಶ್ರಮವನ್ನು ಪ್ರವೇಶಿಸಿದ್ದರು. ಕೆಲವು ವರ್ಷಗಳ ವರೆಗೆ ಸಂಸಾರದ ಸ್ಥಿತಿಗಳನ್ನನುಭವಿಸಿ ಐನಾಪುರದಲ್ಲಿ ಆಚಾರ್ಯ ಶಾಂತಿಸಾಗರಸ್ವಾಮಿಗಳು ಬಂದಾಗ ಅವರಿಂದ ಬ್ರಹ್ಮಚರ್ಯವ್ರತವನ್ನು ಅಂಗೀಕಾರ ಮಾಡಿ ಕೆಲವು ಸಮಯದ ವರೆಗೆ ಉದಾಸೀನಭಾವದಿಂದ ಮನೆಯಲ್ಲಿದ್ದರು. ತದನಂತರ ೧೯೨೫ ನೆಯ ಇಸ್ವಿಯಲ್ಲಿ ನಡೆದ ಶ್ರವಣಬೆಳುಗೊಳದ ಮಹಾಮಸ್ತಕಾಭಿಷೇಕದ ಸಮಯದಲ್ಲಿ ತನ್ನ ಸಂಪತ್ತಿಯ ಸದುಪಯೋಗವನ್ನು ಮಾಡಿ ಆಚಾರ್ಯ ಶಾಂತಿಸಾಗರ ಸ್ವಾಮಿಗಳ ಹಸ್ತದಿಂದ ಕ್ಷುಲ್ಲಕವ್ರತವನ್ನು ಸ್ವೀಕರಿಸಿದರು. ಮತ್ತು ಕ್ಷು. ಪಾರ್ಶ್ವಕೀರ್ತಿ ಎಂಬ ನಾಮಧೇಯದಿಂದ ಅಲಂಕೃತರಾದರು. ತದನಂತರ ಸಂಘದಲ್ಲಿಯೇ ಇದ್ದು ಆಚಾರ್ಯ ಸಂಘದೊಡನೆಯೇ ಸಮ್ಮೇದಾಚಲಾದಿ ತೀರ್ಥಯಾತ್ರೆಯನ್ನು ಮಾಡಿ ಕೊಂಡು ಶ್ರೀ ಸೋನಾಗಿರಿ ಸಿದ್ಧಕ್ಷೇತ್ರದಲ್ಲಿ ಆಚಾರ್ಯಶ್ರೀಯವರಿಂದ ಮುನಿ ದೀಕ್ಷೆಯನ್ನು ಗ್ರಹಣ ಮಾಡಿ ಕುಂಥು ಸಾಗರರೆಂಬ ಸುಂದರಾಕ್ಷರಗಳಿಂದ ಅಲಂಕೃತರಾದರು. ಆಚಾರ್ಯ ಸಂಘದಲ್ಲಿ ಕ್ಷು. ಜ್ಞಾನಸಾಗರರೆಂಬ ( ಪಂ. ನಂದನಲಾಲ ಶಾಸ್ತ್ರೀ ) ವಿದ್ವಾನ್ ಸಂಯಮಿಗಳಿದ್ದರು. ಅವರಿಂದ ಸಂಘದ ಎಲ್ಲಾ ಸಾಧುಗಳು ಅಧ್ಯಯನ ವನ್ನು ಮಾಡುತ್ತಿದ್ದರು. ಶ್ರೀ ಮುನಿರಾಜ ಕುಂಥುಸಾಗರಸ್ವಾಮಿಗಳೂ ಸಂಸ್ಕೃತ ಗ್ರಂಥಗಳನ್ನು ಅಭ್ಯಾಸ ಮಾಡಿ ತಮ್ಮ ಸತತ ಅಧ್ಯವಸಾಯ, ಪರಿಶ್ರಮ, ಮತ್ತು ಪೂರ್ವಾರ್ಜಿತ ಸಾತಿಶಯ ಕ್ಷಯೋಪಶಮದ ಬಲ ದಿಂದ ಅಲ್ಪಕಾಲದಲ್ಲಿಯೇ ಬಲುದೊಡ್ಡ ವಿದ್ವಾಂಸರಾದರು. ಇವತ್ತು

ಶ್ರೀಯುವರು ಸಂಸ್ಕೃತಭಾಷೆಯಲ್ಲಿ ದೊಡ್ಡ ದೊಡ್ಡ ಗ್ರಂಥಗಳ ರಚನೆಗ ಳನ್ನು ಮಾಡುತ್ತಾರೆ. ಇದೇ ಅವರ ಪ್ರೌಢವಿದ್ವತ್ತಿಗೆ ಬಲವತ್ತಾದ ನಿದರ್ಶನ.

ಪೂಜ್ಯವರ್ಯರ ದರ್ಶನವನ್ನು ಒಂದು ಸಾರಿ ಮಾಡಿದ ಭಕ್ತಭವ್ಯ ರಿಗೆ ಅವರ ಪ್ರತಿಭಾಶಾಲಿತ್ವದ ಮತ್ತು ತಪೋನಿಷ್ಠತೆಯ ಪರಿಚಯವಾಗ ದಿರದು. ಗ್ರಂಥನಿರ್ಮಾಣಕಲೆಯಲ್ಲಿ ನೈಪುಣ್ಯವನ್ನು ಹೊಂದಿದಂತೆಯೇ ವಕ್ತೃತ್ವಕಲೆಯಲ್ಲಿಯೂ ಪೂಜ್ಯಪಾದರು ವಿಶಿಷ್ಟಪ್ರಭುತ್ವವನ್ನು ಪ್ರಾಪ್ತ ಮಾಡಿರುತ್ತಾರೆ. ಅವರ ಪ್ರಗಾಢ ವಿದ್ವತ್ತೆಯಿಂದ ಕೂಡಿದ ದಿವ್ಯವಾಣಿ ಯಲ್ಲಿ ಸಂಸಾರದ ಪ್ರಾಣಿಗಳನ್ನು ಆಕರ್ಷಿಸುವ, ವಶಮಾಡಿಕೊಳ್ಳುವ ಮತ್ತು ಅವರನ್ನು ಉದ್ಧರಿಸುವ ಒಂದು ವಿಶಿಷ್ಟವಾದ ಸಾಮರ್ಥ್ಯವಿದೆ. ಲಕ್ಷಾಂತರ ಸಂಸ್ಕಾರಹೀನರು ಸಂಸ್ಕೃತರಾದರು. ಆರು ಏಳು ಲಕ್ಷ ಶ್ರಾವ ಕರು ಯಜ್ಞೋಪವೀತವನ್ನು ಧಾರಣೆ ಮಾಡಿ ರತ್ನತ್ರಯ ವಿಭೂಷಿತರಾ ದರು. ಅನೇಕ ಜೈನೇತರರು ಮದ್ಯ ಮಾಂಸಾದಿ ಅಭಕ್ಷ್ಯ ಮತ್ತು ಅಸೇ ವ್ಯಪದಾರ್ಥಗಳನ್ನು ತ್ಯಾಗ ಮಾಡಿ ತಮ್ಮ ಜನ್ಮವನ್ನು ಸಫಲ ಮಾಡಿ ಕೊಂಡರು. ಗುಜರಾತ ಪ್ರಾಂತದಲ್ಲಿ ಪೂಜ್ಯವರ್ಯರ ವಿಹಾರದಿಂದ ಅಪೂ ರ್ವ ಧರ್ಮಪ್ರಭಾವನೆಯಾಯಿತು. ಗುಜರಾತ ಪ್ರಾಂತದ ಅನೇಕ ನರೇ ಶರು ಶ್ರೀಯುವರ ಪಾದಸೇವೆಯಲ್ಲಿ ಸದಾ ಸನ್ನದ್ಧರಾಗಿರುವರಲ್ಲದೆ ತಮ್ಮ ತಮ್ಮ ರಾಜ್ಯದಲ್ಲಿ ಅಹಿಂಸಾ ದಿನವನ್ನು ಆಚರಿಸುವ ಬಗ್ಗೆಯೂ, ಪೂಜ್ಯ ಸ್ವಾಮಿಗಳ ಜಯಂತೀ ದಿನವನ್ನು ಆಚರಿಸುವ ಬಗ್ಗೆಯೂ ನಿಯಮಾನು ಸಾರ ರಾಜಾಜ್ಞೆಯನ್ನು ಹೊರಡಿಸಿರುತ್ತಾರೆ. ಸುದಾಸನಾ ಸ್ಟೇಟ್, ಬಲಾ ಸನಾ ಸ್ಟೇಟ್, ಮೋಹನಪುರಾ ಸ್ಟೇಟ್, ಟಿಂಬಾ ಸ್ಟೇಟ್, ಅಲುವಾ ಮೊದಲಾದ ಸಂಸ್ಥಾನಗಳ ಅಧಿಪತಿಗಳು ಪೂಜ್ಯಪಾದರ ಉಪದೇಶಾಮೃತ ವನ್ನು ಪಾನಮಾಡಲು ಸದಾ ಲೋಲುಪರಾಗಿರುತ್ತಾರೆ. ಶ್ರೀಯುವರು ಉಪ ದೇಶವನ್ನು ಕೊಡುವಾಗ ಮಂತ್ರಮುಗ್ಧರಂತೆ ಭಕ್ತಿಯಿಂದ ಆಲಿಸುತ್ತಾರೆ. ಬಡೋದಾ ಸಂಸ್ಥಾನದಲ್ಲಿ ಪೂಜ್ಯ ಶ್ರೀಯುವರ ಅಪೂರ್ವ ಸ್ವಾಗತ ವಾಗಿ ದ್ದಲ್ಲದೆ ದಿವಾನರ ಉಪಸ್ಥಿತಿಯಲ್ಲಿ ರಾಜ್ಯದ ನ್ಯಾಯಮಂದಿರದಲ್ಲಿ ಪೂಜ್ಯ ವರ್ಯರ ಉಪದೇಶವಾಯ್ತು. ವಿಶೇಷವೇನು ? ಶ್ರೀಯುವರ ಪರಮ

ಪ್ರಭಾವದಿಂದ ಪರವಶರಾಗಿ ತಾರಂಗಾ ಸಿದ್ಧಕ್ಷೇತ್ರದಲ್ಲಿ ಜರಗಿದ ವಿರಾಟ್ ಉತ್ಸವದಲ್ಲಿ ಚತುಃಸಂಘದ ಸಮಕ್ಷ ಶ್ರೀ ಆಚಾರ್ಯ ಶಾಂತಿಸಾಗರಸ್ವಾಮಿಗಳು ಶ್ರೀ ಪೂಜ್ಯ ಸ್ವಾಮಿಗಳಿಗೆ " ಆಚಾರ್ಯ " ಪದವಿಯನ್ನು ಕೊಟ್ಟಿರುತ್ತಾರೆ. ಇದು ಇವರ ಅತ್ಯಂತ ಸಂಕ್ಷಿಪ್ತ ಪರಿಚಯ. ಯಥಾರೀತಿ ಬರೆಯಲು ಒಂದು ಸ್ವತಂತ್ರ ಗ್ರಂಥವೇ ಆಗಬಹುದು.

ಪೂಜ್ಯ ಶ್ರೀಯವರು ತನ್ನ ಅಗಾಧ ವಿದ್ವತ್ತೆಯ ಬಲದಿಂದ ಸಂಸ್ಕೃತವಲ್ಲಿ ಅನೇಕ ಗ್ರಂಥಗಳ ರಚನೆಯನ್ನು ಮಾಡಿರುತ್ತಾರೆ. ಬೋಧಾಮೃತಸಾರ, ಜ್ಞಾನಾಮೃತಸಾರ, ನಿಜಾತ್ಮಶುದ್ಧಿಭಾವನಾ, ಮೋಕ್ಷಮಾರ್ಗಪ್ರದೀಪ, ಶಾಂತಿಸುಧಾಸಿಂಧು, ಶ್ರಾವಕಪ್ರತಿಕ್ರಮಣಸಾರ, ನರೇಶಧರ್ಮದರ್ಪಣ ಮೊದಲಾದ ಅನೇಕ ಗ್ರಂಥಗಳು ಪ್ರಕಾಶನಕ್ಕೆ ಬಂದಿವೆ. ಅಲ್ಲದೆ ಮರಾಠೀ, ಹಿಂದೀ, ಇಂಗ್ಲೀಷು ಮತ್ತು ಗುಜರಾತಿ ಭಾಷೆಗಳಲ್ಲಿ ಪ್ರಕಟವಾಗಿ ಲೋಕಪ್ರಿಯಗಳಾಗಿವೆ. ಕನ್ನಡ ಭಾಷಾಪ್ರೇಮಿಗಳಿಗೂ ಉಪಯೋಗವಾಗುವಂತೆ ಕನ್ನಡದಲ್ಲಿಯೂ ಭಾಷಾಂತರಿಸಿ ಪ್ರಕಟಿಸಬೇಕೆಂದು ನಮ್ಮ ಭಾವನೆ ಇತ್ತು. ಆ ಪ್ರಕಾರ ಈವರೆಗೆ ನಿಜಾತ್ಮಶುದ್ಧಿಭಾವನಾ, ಲಘು ಬೋಧಾಮೃತಸಾರ ಮತ್ತು ಲಘು ಜ್ಞಾನಾಮೃತಸಾರವನ್ನು ಕನ್ನಡದಲ್ಲಿ ಪ್ರಕಟಿಸಿರುತ್ತೇವೆ. ಈಗ ಮೋಕ್ಷಮಾರ್ಗಪ್ರದೀಪವನ್ನು ಭಾಷಾಂತರ ಮಾಡಿಸಿ ಕನ್ನಡ ವಾಚಕರ ಮುಂದಿಟ್ಟಿರುತ್ತೇವೆ. ಯಥಾನುಕೂಲ ಬೇರೆ ಗ್ರಂಥಗಳನ್ನು ಕನ್ನಡಿಸುವಂತೆ ಪ್ರಯತ್ನಿಸುವೆವು.

ಪ್ರಕೃತ ಗ್ರಂಥದ ಅನುವಾದವನ್ನು ಮಾಡಲು ಶ್ರಮವಹಿಸಿದಬಗ್ಗೆ ಶ್ರೀ. ಪಂ. ಧರಣೇಂದ್ರಕುಮಾರ ಶಾಸ್ತ್ರಿಗಳಿಗೂ ಮತ್ತು ಕನ್ನಡಿಗರಲ್ಲದಿದ್ದರೂ ಧರ್ಮಪ್ರೇಮದಿಂದ ಪ್ರಕಾಶನ ಕಾರ್ಯಕ್ಕೆ ಸಹಾಯತೆಯನ್ನಿತ್ತ ಪ್ರಕಾಶಕರಿಗೂ ನಾವು ಧನ್ಯವಾದಗಳನ್ನರ್ಪಿಸುತ್ತೇವೆ. ಇತಿ.

ವಿನೀತ—

ವರ್ಧಮಾನ ಪಾರ್ಶ್ವನಾಥ ಶಾಸ್ತ್ರೀ.

ಮಂತ್ರೀ—ಆಚಾರ್ಯ ಕುಂಥುಸಾಗರ ಗ್ರಂಥಮಾಲೆ.

—o—

# ವಾಚಕರಿಗೆರಡು ಶಬ್ದ.

ಆಚಾರ್ಯಶ್ರೀ ಕುಂಥುಸಾಗರ ಮಹಾಸ್ವಾಮಿಗಳವರು ತನ್ನ ಸತತೋದ್ಯೋಗದಿಂದ ಕರ್ಣಾಟಕ ಕವಿಪರಂಪರೆಯ ಧಾರೆಯು ಬತ್ತಿಹೋಗಿಲ್ಲವೆಂಬುದನ್ನು ಪ್ರಪಂಚಕ್ಕೆ ತಿಳಿಸಲು ಈ ಗ್ರಂಥವನ್ನು ಸ್ವತಂತ್ರಗ್ರಂಥವನ್ನಾಗಿ ರಚನೆ ಮಾಡಿರುವುದು ಪ್ರತ್ಯೇಕ ಕರ್ಣಾಟಕ ಜೈನಬಂಧುವು ಹೆಮ್ಮೆ ಪಡುವ ವಿಷಯವಾಗಿದೆ. ಆಚಾರ್ಯಶ್ರೀಯವರು ಜನ್ಮತಃ ಕನ್ನಡಿಗರಾಗಿಯೇ ಇರುವರು. ಇಂತಹ ಮಹಾಗ್ರಂಥಗಳ ರಚನೆಯು ಜೈನ ಸಮಾಜದಲ್ಲಿ ಹಿಂದಿನ ಕವಿಗಳ ವಾರಸ್ಸುದಾರರಿಗೇನೆಯೇ ಸಿಕ್ಕಿರುವುದು ಹೆಚ್ಚಿನ ಆನಂದದಾಯಕವಾದ ವಿಷಯವಾಗಿದೆ.

ಇಂತಹ ಸಾಹಿತ್ಯಸೇವೆಯಲ್ಲಿ ಶ್ವೇತಾಂಬರ ಸಾಧುಗಳು ಬಹಳವಾಗಿ ಮುಂದರಿದಿದ್ದಾರೆ. ಇಂದಿನವರೆಗೆ ಅವರಲ್ಲಿ ಸಾಹಿತ್ಯಗ್ರಂಥದ ನಿರ್ಮಾಪಣೆಯ ಪರಂಪರೆಯು ಅಕ್ಷುಣ್ಣವಾಗಿ ನಡೆದು ಬಂದಿದೆ. ಶ್ವೇತಾಂಬರ ಸಾಧುಗಳ ಪ್ರಧಾನಕಾರ್ಯಗಳಲ್ಲಿ ಗ್ರಂಥನಿರ್ಮಾಪಣೆಯು ಮುಖ್ಯವಾಗಿದೆ. ಆದರೆ ದಿಗಂಬರ ಯತಿಗಳು ಎಷ್ಟು ಚಾರಿತ್ರಪಾಲನೆಯ ಕಡೆಗೆ ಧ್ಯಾನಕೊಡುತ್ತಿದ್ದಾರೋ ಅದರ ಮೂರುಭಾಗದಲ್ಲಿ ಒಂದುಭಾಗವನ್ನು ಕೂಡಾ ಸ್ವತಂತ್ರ ಸಾಹಿತ್ಯನಿರ್ಮಾಣದ ಕಡೆಗೆ ಲಕ್ಷ್ಯ ಕೊಡುವುದಿಲ್ಲ. ಆದುದರಿಂದ ಹಲವು ವರ್ಷಗಳಿಂದ ಈ ಮಹತ್ಕಾರ್ಯವು ನಿಂತುಹೋಗಿತ್ತು. ಆದರೆ ಆಚಾರ್ಯಶ್ರೀಯವರು ಅನೇಕ ವರ್ಷಗಳಿಂದ ನಿಂತುಹೋಗಿರುವ ಈ ಸಾಹಿತ್ಯರಚನೆಯ ಮಾರ್ಗಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟಿರುವುದು ಸಮಾಜೋತ್ಥಾನದ ಸೂಚನೆಯೇ ಸರಿ. ಸಮಾಜದ ಮುಂದೆ ಇಂತಹ ಆದರ್ಶದ ಮೇಲ್ಪಂಕ್ತಿಯನ್ನು ಹಾಕಿಕೊಡುವ ಸುಯೋಗವು ಮರಳಿಯೊಂದು ಸಲ ಕೀರ್ತಿಶೇಷ ಕರ್ಣಾಟಕಕವಿಗಳ ವಾರಸ್ಸುದಾರರ ಪಾಲಿಗೇನೆಯೇ ಬಂದಿರುವುದು. ಇಡೀಸಮಾಜದಲ್ಲಿ ಯಾರೂ ಆಚಾರ್ಯಶ್ರೀಯವರಂತಹ ಸ್ವತಂತ್ರ ಸಾಹಿತ್ಯರಚನೆಯನ್ನು ಇಷ್ಟು ಮುಂದರಿಸಲಿಲ್ಲ. ಪ್ರತ್ಯೇಕ ಕರ್ಣಾಟಕ ಬಂಧುವಿಗೆ ಇಂತಹ ಆದರ ಕೃತ್ಯದಿಂದ ಆಚಾರ್ಯಶ್ರೀಯವರು ಗೌರವ ತಂದು ಕೊಟ್ಟುದಕ್ಕಾಗಿ ಅವರಿಗೆ ಕೃತಜ್ಞನಾಗಿರಲೇ ಬೇಕು.

ಧರಣೇಂದ್ರಕುಮಾರ, ಮುಂಬಯಿ.

ಶ್ರೀವೀತರಾಗಾಯ ನಮಃ

## ಮುನಿರಾಜ ಶ್ರೀಕುಂಥುಸಾಗರವಿರಚಿತಃ

# ಮೋಕ್ಷಮಾರ್ಗಪ್ರದೀಪಃ

---

**ಚತ್ವಾರಿಂಶದ್ಗುಣೈಃ ಷಡ್ಭಿರ್ಯುಕ್ತೈರ್ನಿತ್ಯಂ ವಿಭೂಷಿತಂ ।**
**ಶ್ರೀಜಿನೇಶಂ ಕೃಪಾಸಿಂಧುಂ ವಾಂಛಿತಾರ್ಥಪ್ರದಂ ಸ್ತುವೇ ॥ ೧ ॥**

ಅರ್ಥ— ಯಾವ ಅರಹಂತಪರಮೇಷ್ಠಿಗಳು ೪೬ ಗುಣಗಳಿಂದ ಶೋಭಿತರಾಗಿರುವರೋ, ದಯಾಗುಣಕ್ಕೆ ಸಮುದ್ರದಂತಿರುವರೋ, ಮತ್ತು ಇಷ್ಟಾರ್ಥವನ್ನು ನೀಡುವವರಾಗಿರುವರೋ ಅಂತಹ ಅರಹಂತಪ ರಮೇಷ್ಠಿಗಳನ್ನು ನಾನು ಸ್ತುತಿಸುವೆನು.

**ಅಷ್ಟಕರ್ಮವಿನಿರ್ಮುಕ್ತಂ, ಯುಕ್ತಮಷ್ಟಗುಣೈಃ ಸದಾ ।**
**ನಿತ್ಯಂ ನಿರುಪಮಂ ಶುದ್ಧಂ, ಸಿದ್ಧಂ ನೌಮಿ ಸುಸೌಖ್ಯದಂ ॥ ೨ ॥**

ಅರ್ಥ—ಯಾವ ಸಿದ್ಧಪರಮೇಷ್ಠಿಗಳು ಜ್ಞಾನಾವರಣವೊದಲಾದ ಎಂಟು ಕರ್ಮಗಳ ಬಂಧನದಿಂದ ಮುಕ್ತರಾದವರೋ ಹಾಗೇನೇಯೋ ಈ ಎಂಟು ಕರ್ಮಗಳ ನಾಶದಿಂದ ಅನಂತಜ್ಞಾನಾದಿ ಎಂಟು ಗುಣಗಳಿಂದ ಶೋಭಾಯಮಾನರಾಗಿರುವರೋ. ಉಪಮಾನರಹಿತರೋ, ನಿತ್ಯರೋ, ಶುದ್ಧರೋ, ಮತ್ತು ತನ್ನ ಆತ್ಮನಿಂದುಂಟಾದ ಅನಂತಸುಖವನ್ನು ಕೊಡು ವರೋ ಅಂತಹ ಸಿದ್ಧಪರಮೇಷ್ಠಿಗಳಿಗೆ ನಾನು ನಮಸ್ಕರಿಸುವೆನು.

**ಷಟ್ತ್ರಿಂಶತ್ಸುಗುಣೈಃ ಪೂತಮಾಚಾರ್ಯಂ ಶಾಂತಿದಾಯಕಂ ।**
**ಚಿದಾನಂದಂ ಕ್ಷಮಾಸಿಂಧುಂ ದೀಕ್ಷಾಶಿಕ್ಷಾಪ್ರದಂ ಭಜೇ ॥ ೩ ॥**

ಅರ್ಥ—ಯಾವ ಆಚಾರ್ಯಪರಮೇಷ್ಠಿಗಳು ೧೨ಪ್ರಕಾರಗಳ ತಪ ಗಳಿಂದಲೂ, ೫ಪ್ರಕಾರದ ಆಚಾರಗಳಿಂದಲೂ' ೩ಪ್ರಕಾರದ ಗುಪ್ತಿಗಳಿಂದ ಲೂ, ೬ಪ್ರಕಾರದ ಆವಶ್ಯಕಕ್ರಿಯೆಗಳಿಂದಲೂ, ಮತ್ತು ೧೦ಪ್ರಕಾರದ

ಧರ್ಮಗಳಿಂದಲೂ ಪವಿತ್ರರಾದವರೂ, ಎಲ್ಲರಿಗೂ ಶಾಂತಿಯನ್ನುಂಟು ಮಾಡುವವರೂ, ಹಾಗೇನೇಯೇ ಚೈತನ್ಯಮಯಶುದ್ಧಾತ್ಮನಲ್ಲಿ ಲೀನರಾದ ವರಾಗಿರುವುದರಿಂದ ಆನಂದಸ್ವರೂಪರಾಗಿರುವರೋ ಅಂದರೆ ಸಂಕಲ್ಪ-ವಿಕಲ್ಪ ರಾಗ—ದ್ವೇಷ, ಮತ್ತು ಚಿಂತಾ—ಆತುರತೆ ಮೊದಲಾದ ದುಃಖ ಗಳ ಕಾರಣಗಳಿಂದ ರಹಿತರಾದವರೂ, ಶಾಂತಿಗುಣಕ್ಕೆ ಸಾಗರದೋಪಾದಿ ಯಲ್ಲಿರುವರೋ, ಭವ್ಯಜೀವಗಳಿಗೆ ಜೈನೇಶ್ವರೀದೀಕ್ಷೆ ಮತ್ತು ಶಿಕ್ಷೆಯನ್ನು ಕೊಡುವವರಾಗಿರುವರೋ ಅಂತಹ ಆಚಾರ್ಯಪರಮೇಷ್ಠಿಗಳಿಗೆ ನಾನು ನಮಸ್ಕರಿಸುತ್ತೇನೆ.

**ಅವಿದ್ಯಾಧ್ವಂಸಕಂ ಪೂತಂ ಪಾಠಕಂ ಸ್ವಾನ್ಯಬೋಧಕಂ ।**
**ವಿಂಶತಿಪ್ರಮಿತೈರ್ಯುಕ್ತಂ ಗುಣೈಃ ಪಂಚಾಧಿಕೈರ್ಯಜೇ ॥ ೪ ॥**

ಅರ್ಥ —ಯಾವ ಉಪಾಧ್ಯಾಯಪರಮೇಷ್ಠಿಗಳು ಅಜ್ಞಾನದ ನಾಶ ಕರಾಗಿಯೂ, ತನ್ನ ಆತ್ಮ ಮತ್ತು ಬೇರೆ ಭವ್ಯಜೀವರುಗಳಿಗೆ ಜ್ಞಾನವ ನ್ನುಂಟುಮಾಡುವವರಾಗಿಯೂ, ೧೧ ಅಂಗ ಮತ್ತು ೧೪ ಪೂರ್ವಗಳನ್ನು ತಿಳಿದುಕೊಳ್ಳುವ ೨೫ ಮೂಲಗುಣಳಿಂದ ಕೂಡಿದವರಾಗಿಯೂ, ಇರುವ ಉಪಾಧ್ಯಾಯಪರಮೇಷ್ಠಿಗಳನ್ನು ಪೂಜಿಸುವೆನು.

**ಸ್ವಾಧ್ಯಾಯಧ್ಯಾನಸಂಲಗ್ನಮಷ್ಟವಿಂಶತಿಭಿರ್ಗುಣೈಃ ।**
**ಯುಕ್ತಂ ಸಾಧುವರಂ ನೌಮಿ, ಸ್ವಾತ್ಮರಕ್ತಂ ತಪೋಧನಂ ॥ ೫ ॥**

ಅರ್ಥ—ಯಾವ ಸರ್ವಸಾಧುಗಳು ನಿರಂತರ ಸ್ವಾಧ್ಯಾಯ ಧ್ಯಾನ ದಲ್ಲಿ ತಲ್ಲೀನರಾಗಿರುವರೋ, ನಿಜಾತ್ಮನಲ್ಲಿ ಮಗ್ನರಾಗಿರುವರೋ, ತಪ ಸ್ಸನ್ನೇ ತನ್ನ ಧನವೆಂದು ತಿಳಿಯುವರೋ, ಪಂಚಮಹಾವ್ರತ, ಪಂಚಸಮಿತಿ ಪಂಚೇಂದ್ರಿಯನಿಗ್ರಹ, ಷಡಾವಶ್ಯಕ, ಕೇಶಲೋಚ, ದಿಗಂಬರತ್ವ, ಭೂಶ ಯನ, ಸ್ನಾನಮಾಡದಿರುವಿಕೆ, ಹಲ್ಲುಜ್ಜದಿರುವಿಕೆ, ಒಂದುಸಲಭೋಜನ, ನಿಂತುಕೊಂಡೇ ಆಹಾರತೆಗೆದುಕೊಳ್ಳುವಿಕೆ, ಎಂಬ ೨೮ ಮೂಲಗುಣಗ ಳಿಂದ ಕೂಡಿದವರಾಗಿರುವರೋ ಅಂತಹ ಸಾಧುಪರಮೇಷ್ಠಿಗಳಿಗೆ ನಮ ಸ್ಕರಿಸುವೆನು.

**ಜಗದ್ವಂದ್ಯಾನಹಂ ಪಂಚಪರಮೇಷ್ಠಿಮಹೋದಯಾನ್ ।**
**ಅಭಿವಂದ್ಯ ಮುದಾ ತೇಷಾಂ, ವರ್ಣಯೇ ಗುಣಕೀರ್ತನಂ ॥ ೬ ॥**

ಅರ್ಥ—ಈ ರೀತಿ ನಾನು ಮೂರುಲೋಕಗಳಿಂದಲೂ ವಂದನೀಯರಾದ ಪಂಚಪರಮೇಷ್ಠಿಗಳನ್ನು ನಮಸ್ಕರಿಸಿ ಆ ಪಂಚಪರಮೇಷ್ಠಿಗಳ ಗುಣವರ್ಣನೆಯನ್ನು ಮಾಡುವೆನು.

## ಅರಹಂತರ ೪೬ ಗುಣಗಳ ವರ್ಣನೆ.

**ವಿಶ್ವಬಂಧೋರ್ದಯಾಸಿಂಧೋರ್ಭವ್ಯಬಂಧೋರ್ಜಗತ್ಪತೇಃ ।**
**ಅರ್ಹತಃ ಪ್ರಥಮಂ ವಕ್ಷ್ಯೇ ಜನ್ಮತೋಽತಿಶಯಾನ್ ದಶ ॥ ೭ ॥**

ಅರ್ಥ— ಯಾವ ಅರಹಂತದೇವರು ಜಗದ್ಬಂಧುಗಳಾಗಿಯೂ, ದಯೆಗೆ ಸಮುದ್ರದೋಪಾದಿಯಲ್ಲಿರುವವರೂ, ಭವ್ಯಜೀವರೆಂಬ ಕಮಲಗಳನ್ನು ಅರಳಿಸುವುದಕ್ಕೆ ಸೂರ್ಯನಂತಿರುವವರೂ, ಮತ್ತು ಮೂರುಲೋಕಕ್ಕೂ ಒಡೆಯರಾಗಿರುವವರೂ ಆದ ಅರಹಂತಪರಮೇಷ್ಠಿಗಳ ಜನ್ಮದ ಹತ್ತು ಅತಿಶಯಗಳನ್ನು ಹೇಳುವೆನು.

**ಅರ್ಹತಃ ಸುಂದರಂ ಶಾಂತಂ, ನೃಸುರಾಸುರಪೂಜಿತಂ ।**
**ತ್ರೈಲೋಕ್ಯಭೂಷಣಂ ದಿವ್ಯಂ, ವಪುರ್ಜಾತಂ ಮನೋಹರಂ ॥೮॥**

ಅರ್ಥ—ಭಗವಾನ್ ಶ್ರೀಅರಹಂತದೇವರ ಶರೀರವು ಜನ್ಮದಿಂದಲೇ ಅತಿಸುಂದರವಾಗಿರುತ್ತದೆ. ಮನುಷ್ಯ, ಸುರ, ಅಸುರರುಗಳಿಂದ ಪೂಜಿತವಾಗಿರುತ್ತದೆ. ಮೂರುಲೋಕದ ಭೂಷಣದಂತಿದೆ. ದಿವ್ಯರೂಪ ಮತ್ತು ಶಾಂತರೂಪವಾಗಿರುತ್ತದೆ. ಇದು ಮೂರುಲೋಕದಲ್ಲಿ ಎಲ್ಲಾವಸ್ತುಗಳಿಂದಲೂ ಅಧಿಕಸುಂದರವಾಗಿರುತ್ತದೆ. ಇದು ಜನ್ಮದ ಅತಿಶಯಗಳಲ್ಲಿ ಮೊದಲನೆಯ ಅತಿಶಯವು.

**ದಿವ್ಯೈಃ ಸುಗಂಧಿಮದ್ದ್ರವ್ಯೈಃ ಶುದ್ಧೈರ್ನಿರುಪಮೈಸ್ತಥಾ ।**
**ನಿರ್ಮಿತಂ ಪುಣ್ಯಸಾರಂ ಹಿ ಪ್ರಭೋಃ ರೋಗಹರಂ ವಪುಃ ॥ ೯ ॥**

ಅರ್ಥ—ಎಲ್ಲಾಬಗೆಯ ರೋಗಗಳಿಂದ ರಹಿತವಾದ ಎಲ್ಲಾ ಪುಣ್ಯಕರ್ಮದ ಸಾರಭೂತವಾದ ಜಿನೇಶ್ವರರ ಶರೀರವು ಎಲ್ಲಾಬಗೆಯ ಉಪಮೆಗಳಿಂದ ರಹಿತವಾದ ಶುದ್ಧ ಮತ್ತು ಅತ್ಯಂತ ಅನುಪಮ ಸುಗಂಧದ್ರವ್ಯಗಳಿಂದ ಮಾಡಲ್ಪಟ್ಟಿದೆ. ಇದು ಎರಡನೇ ಅತಿಶಯವು.

**ಶುದ್ಧಂ ಸ್ಫಟಿಕಸಂಕಾಶಂ, ಸ್ವೇದಮುಕ್ತಂ ನಿರಾಮಯಂ ।**
**ಭವ್ಯವೃಂದಮನೋಹಾರಿ, ಶ್ಲಾಘ್ಯಂ ಪೂತಂ ವಪುಃ ಪ್ರಭೋಃ॥೧೦**

ಅರ್ಥ —ಸ್ಫಟಿಕದಂತೆ ಅತಿಶುದ್ಧವೂ, ಮತ್ತು ಎಲ್ಲಾ ರೋಗಗಳಿಂದ ರಹಿತವೂ, ಆದ ಭಗವಂತನ ಶರೀರ ನಿರಂತರ ಬೆವರಿನಿಂದ ರಹಿತವಾಗಿರುತ್ತದೆ. ಆದುದರಿಂದಲೇ ಅದು ಭವ್ಯಜೀವರುಗಳಿಗೆ ಮನೋಹರವಾಗಿ ಕಂಡುಬರುತ್ತದೆ. ಅತಿಪ್ರಶಂಸನೀಯ ಮತ್ತು ಪವಿತ್ರವೆಂದು ತಿಳಿಯಲಾಗುತ್ತದೆ. ಇದು ಅರಹಂತರ ಮೂರನೇ ಅತಿಶಯವು.

**ಮಲಮೂತ್ರೈಃ ಸದಾಮುಕ್ತಂ, ಸುಂದರಂ ಚಂದ್ರವದ್ರುಚಿ ।**
**ಪುಣ್ಯಪುಂಜಂ ವಪುರ್ಜಾತಂ, ಪಾಪಹರ್ತುಃ ಸುಖಪ್ರದಂ ॥ ೧೧ ॥**

ಅರ್ಥ—ಎಲ್ಲಾ ಪಾಪಗಳನ್ನು ದೂರಮಾಡುವ ಭಗವಂತನ ಶರೀರವು ಚಂದ್ರನಂತೆ ಆನಂದವನ್ನುಂಟುಮಾಡುವದಾಗಿದೆ. ಅತ್ಯಂತಮನೋಜ್ಞವಾಗಿದೆ. ಪುಣ್ಯದ ಪಿಂಡವಾಗಿದೆ. ಎಲ್ಲರಿಗೂ ಸುಖವನ್ನುಂಟು ಮಾಡುವುದಾಗಿದೆ. ಹೀಗಿದ್ದರೂ ಆ ಶರೀರವು ಪವಿತ್ರವಾಗಿದೆ. ಮಲಮೂತ್ರವಿಲ್ಲದಿರುವಿಕೆಯು ನಾಲ್ಕನೇ ಅತಿಶಯವು.

**ಹಿತಂ ಮಿತಂ ಪ್ರಿಯಂ ಸತ್ಯಂ, ವೈರಹರ್ತೃ ಸುಶಾಂತಿದಂ ।**
**ಕ್ಲೇಶಾಪಹಾರಿಸುಖದಂ, ಜಾಯತೇ ಹಿ ವಚಃ ಪ್ರಭೋಃ ॥ ೧೨ ॥**

ಅರ್ಥ—ಭಗವಂತನ ವಚನವು ಎಲ್ಲರಿಗೂ ಹಿತಮಾಡುವಂತಹದಾಗಿಯೂ, ಪರಿಮಿತವಾಗಿಯೂ, ಪ್ರಿಯವಾಗಿಯೂ, ಸತ್ಯವಾಗಿಯೂ, ವೈರವಿರೋಧಗಳನ್ನು ದೂರಮಾಡುವಂತಹದಾಗಿಯೂ, ಎಲ್ಲರಿಗೂ ಸುಖಶಾಂತಿಗಳನ್ನು ಕೊಡುವಂತಹದಾಗಿಯೂ, ಎಲ್ಲಾ ಕಷ್ಟಗಳನ್ನು ದೂರಮಾಡುವಂತಹದಾಗಿಯೂ, ಎಲ್ಲರಿಗೂ ಸುಖವನ್ನು ಕೊಡುವಂತಹದಾಗಿಯೂ ನಿರಂತರ ಇರುತ್ತದೆ, ಇದು ಐದನೇ ಅತಿಶಯವು.

**ಅಜೇಯಂ ಕಾಮದಂ ಗಾಢಂ, ಸಮರ್ಥಂ ಕರ್ಮಭಂಜನೇ ।**
**ನಿರಾತಂಕಂ ಬಲಂ ಜಾತಂ, ವ್ಯಾಧ್ಯಾದಿರಹಿತಂ ಪ್ರಭೋಃ ॥ ೧೩ ॥**

ಅರ್ಥ—ಭಗವಂತನ ಶರೀರದ ಶಕ್ತಿಯು ಯಾರಿಂದಲೂ ಜಯಿಸಲಾಗದು, ಇಚ್ಛಿತಫಲವನ್ನು ಕೊಡುವಂತಹದಾಗಿಯೂ, ಉತ್ತಮ ಸಂಹನ

ನವನ್ನು ಧರಿಸಿದಂತಹದಾಗಿಯೂ, ಕರ್ಮನಾಶದಲ್ಲಿ ಸಮರ್ಥವಾಗಿಯೂ, ಎಲ್ಲಾ ಬಾಧೆಗಳಿಂದಲೂ ರಹಿತವಾದುದಾಗಿಯೂ, ಆಧಿ-ವ್ಯಾಧಿ, ರೋಗ, ಶೋಕ ಮೊದಲಾದವುಗಳಿಂದ ರಹಿತವಾಗಿ ಆಗುತ್ತದೆ. ಇದು ಅತುಲಬಲ ವೆಂಬ ಆರನೇ ಅತಿಶಯವು.

ಯಸ್ಯಾಂಗೇ ರುಧಿರಂ ಶುದ್ಧಂ, ಶುಭ್ರಂ ಸ್ವಚ್ಛಂ ಹಿ ದುಗ್ಧವತ್ ।
ಪುಣ್ಯಮೂರ್ತೇಃ ಸದಾ ದೀಪ್ತಂ, ಸ್ತುತ್ಯಂ ಶ್ರೇಷ್ಠಂ ಮನೋಹರಂ ॥

ಅರ್ಥ—ಪುಣ್ಯಮೂರ್ತಿಯಾದ ಭಗವಂತನ ಶರೀರದಲ್ಲಿ ಯಾವ ರಕ್ತವಿರುವುದೋ ಅದು ಹಾಲಿನಂತೆ ನಿರ್ಮಲ ಮತ್ತು ಸ್ವಚ್ಛವಾಗಿರುತ್ತದೆ. ಯಾವಾಗಲೂ ಪ್ರಕಾಶಮಾನವಾಗಿಯೂ, ಶ್ರೇಷ್ಠವಾಗಿಯೂ, ಮತ್ತು ಮನೋಹರವಾಗಿಯೂ ಆಗಿರುತ್ತದೆ. ಇದು ಏಳನೇ ಅತಿಶಯವು.

ಭವ್ಯಾನಾಂ ಶಾಂತಿದಂ ನಿತ್ಯಂ ನರಾಮರಸುಸೇವಿತಂ ।
ಸಮಚತುರಸಂಸ್ಥಾನಂ ಪ್ರಭೋರ್ಜಾತಂ ಮನೋಹರಂ ॥ ೧೫ ॥

ಅರ್ಥ—ಯಾವ ಪ್ರಭುವಿನ ಶರೀರದ ಆಕಾರವು ಯಾವಾಗಲೂ ಭವ್ಯಜೀವರುಗಳಿಗೆ ಶಾಂತಿಯನ್ನುಂಟು ಮಾಡುವಂತಹದಾಗಿಯೂ, ಮನುಷ್ಯ--ದೇವತೆಗಳಿಂದ ಪೂಜಿಸಲ್ಪಟ್ಟದ್ದಾಗಿಯೂ ಮತ್ತು ಮನೋಹರವಾಗಿಯೂ ಇರುತ್ತದೆ. ಇದು ಸಮಚತುರಸ್ರಸಂಸ್ಥಾನವೆಂಬ ಭಗವಂತನ ಎಂಟನೇ ಅತಿಶಯವು.

ಅಷ್ಟಭಿಃ ಸಾಧಿಕೇನಾಪಿ ಸಹಸ್ರೇಣ ಯುತಂ ಪ್ರಭೋಃ ।
ಲಕ್ಷಣೇನ ಸದಾ ಪೂಜ್ಯಂ ಸುಖದಂ ಕಾಮದಂ ವಪುಃ ॥ ೧೬ ॥

ಅರ್ಥ—ಆ ದೇವರ ಶರೀರವು ಸಮಚತುರಸ್ರವೆಂಬ ಮೊದಲನೇ ಸಂಸ್ಥಾನದಿಂದ ಸುಶೋಭಿತವಾಗಿದೆ. ಆದುದರಿಂದ ಅದು ೧೦೦೮ ಶುಭ ಲಕ್ಷಣದಿಂದ ಕೂಡಿದುದಾಗಿ ಯಾವಾಗಲೂ ಪೂಜ್ಯವಾಗಿಯೂ, ಸುಖ ಕೊಡುವಂತಹದಾಗಿಯೂ, ಸರ್ವಾಂಗಸುಂದರವಾಗಿಯೂ ಆಗಿದೆ. ಇದು ಒಂಭತ್ತನೇ ಅತಿಶಯವು.

ತದ್ವಜ್ರವೃಷಭನಾರಾಚ-ಸಂಹನನಂ ಜಗತ್ಪ್ರಭೋಃ ।
ಕರ್ಮಾರಿಭೇದನೇ ಪ್ರೌಢಂ ನಿತಾಂತಂ ವೀರ್ಯಸೂಚಕಂ ॥ ೧೭ ॥

ಅರ್ಥ— ಮೂರುಲೋಕಗಳಿಗೆ ಸ್ವಾಮಿಯಾದ ಭಗವಂತನ ಶರೀರವು ವಜ್ರ-ಋಷಭನಾರಾಚವೆಂಬ ಎಲ್ಲದಕ್ಕಿಂತಲೂ ಉತ್ತಮವಾದ ಮೊದಲನೇ ಸಂಹನನದ್ದಾಗಿದೆ. ಆದುದರಿಂದ ಅದು ಕರ್ಮಶತ್ರುಗಳನ್ನು ನಾಶಮಾಡುವುದರಲ್ಲಿ ಸಮರ್ಥವಾಗಿದೆ. ಮತ್ತು ಮೇರೆ ಇಲ್ಲದ ಬಲವುಳ್ಳದ್ದಾಗಿದೆ. ಇದು ಭಗವಂತನ ಹತ್ತನೇ ಅತಿಶಯವು.

**ಏವಂ ಸುಪುಣ್ಯಪಾಕೇನ ಲಬ್ಧಾ ಆನಂದದಾಯಕಾಃ ।**
**ಜನ್ಮತೋ ದಶ ಪೂಜ್ಯಸ್ಯ ಪ್ರಭೋರತಿಶಯಾಃ ಸ್ಮೃತಾಃ ॥ ೧೮ ॥**

ಅರ್ಥ—ಲೋಕಪೂಜಿತರಾದ ಅರ್ಹತ್ಪರಮೇಶ್ವರರ ಅತ್ಯಂತ ಪುಣ್ಯದಿಂದ ಪ್ರಾಪ್ತವಾದ ಮತ್ತು ಎಲ್ಲರಿಗೂ ಆನಂದವನ್ನು ನೀಡತಕ್ಕ ಮೇಲೆ ಬರೆದ ಜನ್ಮದ ಅತಿಶಯಗಳು ಹತ್ತು ಆಗಿರುತ್ತವೆ.

## ಕೇವಲಜ್ಞಾನದಿಂದುಂಟಾದ ಹತ್ತು ಅತಿಶಯಗಳು.

**ಜಗದ್ವಂದ್ಯಾರ್ಹತೋ ನೂನಂ ಪೂರ್ವಪುಣ್ಯಸ್ಯ ಸೂಚಕಾಃ ।**
**ದಶ ಕೇವಲಬೋಧಸ್ಯ ವರ್ಣ್ಯಂತೇಽತಿಶಯಾಃ ಸ್ಫುಟಂ॥ ೧೯ ॥**

ಅರ್ಥ— ಜಗದ್ವಂದ್ಯನಾದ ಅರಹಂತದೇವನಿಗೆ ಕೇವಲಜ್ಞಾನ ಉಂಟಾಗುವ ಕಾಲದಲ್ಲಿ ಅವರ ಮೊದಲನೇ ಪುಣ್ಯಗಳನ್ನು ಸೂಚಿಸುವಂತಹ ಹತ್ತು ಅತಿಶಯಗಳು ಪ್ರಕಟವಾಗುತ್ತವೆ. ಮುಂದೆ ಆ ಕೇವಲಜ್ಞಾನದ ಹತ್ತು ಅತಿಶಯಗಳು ಹೇಳಲ್ಪಡುತ್ತವೆ.

**ಶತಯೋಜನದೇಶೇಽಭೂತ್ ಸುಭಿಕ್ಷಂ ಜನಶರ್ಮದಂ ।**
**ವಾಂಛಿತಾರ್ಥಪ್ರದಂ ಪೂರ್ವ-ಪುಣ್ಯೋಪಾರ್ಜನಸೂಚಕಂ ॥ ೨೦॥**

ಅರ್ಥ—ಯಾವ ಸ್ಥಾನದಲ್ಲಿ ಅರಹಂತದೇವರು ವಿರಾಜಿಸಿರುವರೋ ಆ ಸ್ಥಾನದಿಂದ ೧೦೦ಯೋಜನಗಳ ವರೆಗೆ ಇಚ್ಛಿತ ಫಲವನ್ನು ಕೊಡುವಂತಹದಾಗಿಯೂ, ಎಲ್ಲಾ ಬಗೆಯ ಸುಖವನ್ನೀಯುವಂತಹದಾಗಿಯೂ, ಇರುವ ಸುಭಿಕ್ಷವಿರುತ್ತದೆ. ಇದರಿಂದ ಅಲ್ಲಿರುವ ಎಲ್ಲಾ ಪ್ರಜೆಗಳು ಸುಖಿಗಳಾಗಿರುತ್ತಾರೆ. ಇದು ಕೇವಲಜ್ಞಾನದ ಮೊದಲನೇ ಅತಿಶಯವು.

**ಸುರಾಸುರೇಂದ್ರಭಾರಂ ಭೂಃ ಸೋಢುಂ ಶಕ್ತಾ ಯತೋ ನ ಹಿ ।**
**ಕಥಂ ಮೇಽನಂತವೀರ್ಯಸ್ಯ ಸಹೇತೇತಿ ಚಚಾಲ ಖೇ ॥ ೨೧ ॥**

ಅರ್ಥ—ಈ ಭೂಮಿಯು ಮನುಷ್ಯ-ದೇವ ಮತ್ತು ಇಂದ್ರರುಗಳ ಭಾರವನ್ನು ಸಹಿಸಲು ಮೊದಲಿಂದಲೇ ಅಸಮರ್ಥವಾಗಿರುವಲ್ಲಿ ಅನಂತ ವೀರ್ಯಧಾರಿಯಾದ ನನ್ನ ಭಾರವನ್ನು ಹೇಗೆ ಸಹನೆ ಮಾಡೀತು? ಇದನ್ನರಿತೇ ಈ ಭಗವಂತರಾದ ಅರಹಂತದೇವರು ಆಕಾಶದಲ್ಲಿಯೇ ಗಮನ ಮಾಡುತ್ತಾರೆ. ಇದು ಕೇವಲಜ್ಞಾನದ ಎರಡನೇ ಅತಿಶಯವು.

**ಘಾತಿಕರ್ಮಪ್ರಣಾಶಾದ್ಯಃ ಪ್ರಾಪ್ತಾನಂತಚತುಷ್ಟಯಃ ।**
**ಶ್ರೀಮತೇ ಚತುರಾಸ್ಯಾಯ ತಸ್ಮೈ ಭಗವತೇ ನಮಃ ॥ ೨೨ ॥**

ಅರ್ಥ—ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳ ನಾಶದಿಂದ ಯಾರಿಗೆ ಅನಂತಜ್ಞಾನ, ಅನಂತದರ್ಶನ, ಅನಂತಸುಖ ಮತ್ತು ಅನಂತ ವೀರ್ಯಗಳೆಂಬ ಅನಂತಚತುಷ್ಟಯಗಳು ಪ್ರಾಪ್ತವಾಗಿವೆಯೋ ಮತ್ತು ಯಾರು ಅನಂತಜ್ಞಾನ ಮೊದಲಾದ ಅಂತರಂಗಲಕ್ಷ್ಮಿಯನ್ನೂ ಮತ್ತು ಬಹಿರಂಗ ಸಮವಸರಣದ ಲಕ್ಷ್ಮಿಯನ್ನೂ ಪಡೆದಿರುವರೋ ಹಾಗೇನೇಯೇ ಇವೇ ಕಾರಣಗಳಿಂದ ನಾಲ್ಕುಮುಖಗಳು ಯಾರಿಗೆ ಪ್ರಕಟವಾಗಿವೆಯೋ ಅಂತಹ ಅರಹಂತದೇವರಿಗೆ ನಾನು ನಮಸ್ಕರಿಸುತ್ತೇನೆ. ಅರ್ಥಾತ್ ಘಾತಿಕರ್ಮಗಳ ನಾಶದಿಂದ ಅರಹಂತದೇವರ ಒಂದು ಮುಖವು ನಾಲ್ಕುಮುಖವಾಗಿ ಕಾಣುತ್ತದೆ. ಅವರು ಪೂರ್ವದಿಕ್ಕಿನ ಕಡೆಗೆ ಮುಖ ಮಾಡಿರುವುದಾದರೂ ಹೇಗೆ ಪೂರ್ವದಿಕ್ಕಿನವರಿಗೆ ಕಾಣುತ್ತಾರೋ ಅದರಂತೆಯೇ ದಕ್ಷಿಣ, ಪಶ್ಚಿಮ ಮತ್ತು ಉತ್ತರದಿಕ್ಕಿನವರಿಗೂ ಕಾಣುತ್ತಾರೆ. ಇದು ಅವರ ಕೇವಲಜ್ಞಾನದಿಂದುಂಟಾದ ಮೂರನೇ ಅತಿಶಯವು.

**ದಯಾಬ್ಧೇಸ್ತವಸಾನ್ನಿಧ್ಯಂ ಪ್ರಾಪ್ತಾ ಜೀವಾಸ್ತ್ಯಜಂತಿ ವೈ ।**
**ಪರಸ್ಪರಂ ದೃಢಂ ವೈರಂ ಹಿಂಸಾಂ ಚ ಸ್ವಸ್ವಭಾವಜಾಂ ॥ ೨೩ ॥**

ಅರ್ಥ— ಅರಹಂತಪರಮೇಷ್ಠಿಗಳು ದಯೆಗೆ ಸಮುದ್ರದಂತಿರುವವರು. ಆದುದರಿಂದ ಅವರ ಸಮೀಪಕ್ಕೆ ಹೋಗಿ ಸಮಸ್ತಜೀವಗಳು ತನ್ನ ತನ್ನ ಪರಸ್ಪರವಾಗಿ ಆಗಿರುವ ದೃಢವಾದ ವೈಮನಸ್ಯವನ್ನೂ ಬಿಡುತ್ತವೆ. ಹಾಗೇನೇಯೇ ತಮ್ಮಸ್ವಭಾವದಿಂದುಂಟಾದ ಹಿಂಸಾಭಾವವನ್ನೂ ಬಿಡು

ತ್ತವೆ. ಸಮವಸರಣದಲ್ಲಿ ನಾಯಿ-ಬೆಕ್ಕುಗಳೂ, ಸಿಂಹ-ಜಿಂಕೆಗಳೂ ಮೊದಲಾದ ಪರಸ್ಪರವಾಗಿ ಜನ್ಮವೈರಿಗಳಾದ ಪ್ರಾಣಿಗಳು ತನ್ನತನ್ನ ವೈರತ್ವವನ್ನು ಬಿಡುತ್ತವೆ. ಇದು ಕೇವಲಜ್ಞಾನದ ನಾಲ್ಕನೇ ಅತಿಶಯವು.

**ರೋಗಾಃ ಕೇऽಪ್ಯುಪಸರ್ಗಾಶ್ಚ ನ ಜಾಯಂತೇ ಜಗತ್ಪ್ರಭೋಃ ।**
**ಪ್ರಸಾದೇನ ದಯಾಸಿಂಧೋಃ ಸುಖಶಾಂತಿರ್ಭವೇದ್ಭುವಿ ॥ ೨೪ ॥**

ಅರ್ಥ— ಅರಹಂತದೇವನು ಕೃಪಾಸಿಂಧುವಾಗಿರುವುದರಿಂದಲೂ, ಮೂರುಲೋಕಗಳಿಗೆ ಸ್ವಾಮಿಯಾಗಿರುವುದರಿಂದಲೂ, ಅವರು ಎಲ್ಲಿ ವಿರಾಜಿಸುತ್ತಾರೋ ಅಲ್ಲಿ ಯಾವುದೊಂದು ಬಗೆಯ ರೋಗವು ಹರಡುವುದಿಲ್ಲ. ಯಾವುದೊಂದು ತರಹದ ಉಪಸರ್ಗವು ಉಂಟಾಗುವುದಿಲ್ಲ. ಅವರ ಅಸೀಮಪ್ರಸಾದದಿಂದ (ಕೃಪೆಯಿಂದ) ಅಲ್ಲಿ ಸುಖ-ಶಾಂತಿಗಳೇ ನೆಲಸುತ್ತವೆ. ಇದು ಕೇವಲಜ್ಞಾನದ ಐದನೇ ಅತಿಶಯವು.

**ಅಸಾತವೇದನೀಯಂ ಹಿ ಸಮೂಲಂ ನಾಶಿತಂ ತ್ವಯಾ ।**
**ತತೋ ಭುಕ್ತಿರ್ನ ತೇ ಸ್ವಾಮಿನ್ ಸ್ವಸುಖಾಮೃತಭೋಜಿನಃ ॥೨೫॥**

ಅರ್ಥ—ಹೇ ಸ್ವಾಮಿ! ನೀವು ಆತ್ಮಜನ್ಯಸುಖವೆಂಬ ಅಮೃತಭೋಜನವನ್ನು ಮಾಡುವವರಾಗಿರುವಿರಿ. ಹಾಗೇನೇಯೇ ನಿಮ್ಮಿಂದ ಅಸಾತಾವೇದನೀಯಕರ್ಮವು ಬುಡದಿಂದಲೇ ನಾಶಮಾಡಲ್ಪಟ್ಟಿದೆ. ಆದುದರಿಂದ ನೀವು ಎಂದೂ ಕಬಲಾಹಾರ ( ಒಂದು ತುತ್ತನ್ನ) ವನ್ನು ತೆಗೆದುಕೊಳ್ಳುವದಿಲ್ಲ. ಅರ್ಥಾತ್—ಅರಹಂತಪರಮೇಷ್ಠಿಗಳಿಗೆ ಕಬಲಾಹಾರವಿಲ್ಲ. ಅವರ ಪರಮೌದಾರಿಕ ದಿವ್ಯಶರೀರವು ಪ್ರತ್ಯೇಕ ಸಮಯದಲ್ಲಿ ಶುಭಯೋಗಗಳಿಂದ ಬರುವ ನೋಕರ್ಮವರ್ಗಣೆಗಳಿಂದ ಸ್ಥಿರವಾಗಿರುತ್ತದೆ. ಇದು ಕೇವಲಜ್ಞಾನದ ಆರನೇ ಅತಿಶಯವು.

**ಜ್ಞಾನಾವರಣನಿರ್ನಾಶಾದ್ದರ್ಶನಾವರಣಕ್ಷಯಾತ್ ।**
**ಸರ್ವವಿದ್ಯೇಶ್ವರತ್ವಂ ಹಿ ಪ್ರಾಪ್ತಾಯ ಪ್ರಭವೇ ನಮಃ ॥ ೨೬ ॥**

ಅರ್ಥ— ಯಾವ ಅರಹಂತದೇವನು ಜ್ಞಾನಾವರಣೀಯಕರ್ಮದ ನಾಶದಿಂದಲೂ, ಮತ್ತು ದರ್ಶನಾವರಣೀಯಕರ್ಮದ ನಾಶದಿಂದಲೂ,

ಎಲ್ಲಾ ವಿದ್ಯೆಗಳ ಸ್ವಾಮಿತ್ವವನ್ನು ಪಡೆದಿರುವನೋ ಅಂತಹ ಅರಹಂತ ಪರಮೇಷ್ಠಿಗಳಿಗೆ ನಾನು ನಮಸ್ಕರಿಸುತ್ತೇನೆ. ಇದು ಕೇವಲಜ್ಞಾನದಿಂದ ಉಂಟಾದ ಏಳನೇ ಅತಿಶಯವು.

**ವಪುರ್ಮಲಕ್ಷಯಾದೇವ ನ ವೃದ್ಧಿರ್ನಖಕೇಶಯೋಃ ।**
**ತಸ್ಮೈ ನಮೋ ಭಗವತೇ ನಖಕೇಶವಿನಾಶಿನೇ ॥ ೨೭॥**

ಅರ್ಥ—ಅರಹಂತದೇವರ ಯಾವ ಪರಮೌದಾರಿಕ ಶರೀರವಿದೆಯೋ ಆ ಶರೀರದಲ್ಲಿ ಯಾವುದೊಂದು ಬಗೆಯ ಆಹಾರ-ನೀಹಾರಗಳಿರುವುದಿಲ್ಲ. ಆದುದರಿಂದ ಆ ಶರೀರದಲ್ಲಿರುವ ನಖಕೇಶಗಳು ಬೆಳೆಯುವುದಿಲ್ಲ. ಇದ್ದಕ್ಕಿದ್ದ ಹಾಗೆಯೇ ಇರುತ್ತವೆ. ಆದುದರಿಂದ ನಖಕೇಶಗಳ ವೃದ್ಧಿಯನ್ನು ನಾಶಮಾಡಿದ ಅರಹಂತದೇವರಿಗೆ ನಾನು ನಮಸ್ಕರಿಸುತ್ತೇನೆ. ಇದು ಕೇವಲಜ್ಞಾನದಿಂದುಂಟಾದ ಎಂಟನೇ ಅತಿಶಯವು.

**ಮೋಹಕರ್ಮಕ್ಷಯಾತ್ತಸ್ಯ ನಿಷ್ಪಂದೋ ನ ಹಿ ನೇತ್ರಯೋಃ ।**
**ಜೀವನ್ನೇವಾಭವದ್ದೇವಸ್ತಸ್ಮೈ ಭಗವತೇ ನಮಃ ॥ ೨೮ ॥**

ಅರ್ಥ—ಮೋಹನೀಯಕರ್ಮವು ಸಂಪೂರ್ಣನಾಶವಾಗಿರುವುದರಿಂದ ಅರಹಂತದೇವರ ಎರಡು ನೇತ್ರಗಳ ರೆಪ್ಪೆಗಳು ಬೀಳುವುದಿಲ್ಲ. ಅಂದರೆ ಅವರ ಕಣ್ಣುಗಳ ರೆಪ್ಪೆಗಳು ಇತರ ಸಂಸಾರಿಜೀವಗಳಂತೆ ನಿಮಿಷ ನಿಮಿಷಗಳಲ್ಲಿ ಮುಚ್ಚಿ ತೆಗೆಯಲಾಗುವುದಿಲ್ಲ. ಅವರು ಜೀವನ ಅವಸ್ಥೆಯಲ್ಲಿಯೇ ದೇವರೆಂದು ಕರೆಯಲ್ಪಡುತ್ತಾರೆ. ಅಂತಹವರಿಗೆ ನಾನು ನಮಸ್ಕರಿಸುತ್ತೇನೆ. ನೇತ್ರಗಳ ಪರಿಸ್ಪಂದವಾಗದಿರುವುದು ಕೇವಲಜ್ಞಾನದ ಒಂಭತ್ತನೇ ಅತಿಶಯವು.

**ಅಚ್ಛಾಯತ್ವಗುಣಃ ಪ್ರಾಪ್ತಃ ಪರಮೌದಾರಿಕೇ ತನೌ ।**
**ಯಸ್ಯ ತಂ ಪರಮಾತ್ಮಾನಮರ್ಹಂತಂ ಚ ಸದಾ ಸ್ತುವೇ ॥ ೨೯ ॥**

ಅರ್ಥ— ಯಾವ ಅರಹಂತದೇವರ ಪರಮೌದಾರಿಕಶರೀರದ ನೆರಳು ಬೀಳುವುದಿಲ್ಲ. ಅದಕ್ಕೆ ಅಚ್ಛಾಯತ್ವವೆಂದು ಹೇಳಲಾಗುತ್ತದೆ. ಅಂತಹ ಅರಹಂತದೇವರ ಸ್ತೋತ್ರವನ್ನು ನಾನು ಮಾಡುತ್ತೇನೆ. ಅಂದರೆ ಅರಹಂತದೇವರ ಪರಮೌದಾರಿಕಶರೀರದ ನೆರಳು ಬೀಳದಿರುವುದು ಕೇವಲಜ್ಞಾನದ ಹತ್ತನೇ ಅತಿಶಯವು.

**ಘಾತಿಕರ್ಮಕ್ಷಯಾದೇವ ಲೋಕಾಲೋಕಪ್ರಕಾಶಿನಃ ।**
**ಕೇವಲಜ್ಞಾನಸಂಪ್ರಾಪ್ತೌ ದಶ ಚಾತಿಶಯಾಃ ಸ್ಮೃತಾಃ ॥ ೩೦ ॥**

ಅರ್ಥ– ಲೋಕ ಮತ್ತು ಅಲೋಕಗಳ ವಿಷಯಗಳನ್ನು ತಿಳಿಯುವ ಅರಹಂತದೇವರಿಗೆ ಘಾತಿಕರ್ಮಗಳ ನಾಶದಿಂದ ಯಾವಾಗ ಕೇವಲ ಜ್ಞಾನವುಂಟಾಗುವುದೋ ಆಗ ಅವರಿಗೆ ಮೇಲೆ ಬರೆದ ಹತ್ತು ಅತಿಶಯಗಳಾಗುತ್ತವೆ.

## ದೇವತೆಗಳಿಂದ ಮಾಡಲ್ಪಡುವ ಹದಿನಾಲ್ಕು ಅತಿಶಯಗಳು.

**ಕೇವಲಜ್ಞಾನಸಂಪ್ರಾಪ್ತೌ ಭವಂತ್ಯತಿಶಯಾಃ ಪ್ರಭೋಃ ।**
**ಚತುರ್ದಶಪ್ರಮಾಣಾಸ್ತು ವರ್ಣ್ಯಂತೇ ನಿರ್ಜರೈಃ ಕೃತಾಃ ॥ ೩೧ ॥**

ಅರ್ಥ—ಶ್ರೀ ಅರಹಂತದೇವರಿಗೆ ಕೇವಲಜ್ಞಾನ ಉಂಟಾಗಲು ದೇವತೆಗಳಿಂದ ಹದಿನಾಲ್ಕು ಅತಿಶಯಗಳು ಪ್ರಕಟವಾಗುತ್ತವೆ. ಮುಂದಿನ ಶ್ಲೋಕಗಳಲ್ಲಿ ಅವುಗಳ ವರ್ಣನೆ ಮಾಡಲಾಗುತ್ತದೆ.

**ಯೋಜನದ್ವಾದಶೇ ಕ್ಷೇತ್ರೇ ಪ್ರಭೋರ್ವಿಸ್ತಾರಿತಾ ಸುರೈಃ ।**
**ಸರ್ವಭಾಷಾಮಯೀ ವಾಣೀ ಮಿಥ್ಯಾತ್ವಜ್ವರನಾಶಿನೀ ॥ ೩೨ ॥**

ಅರ್ಥ—ದೇವತೆಗಳು ಮಿಥ್ಯಾತ್ವರೂಪ ಜ್ವರವನ್ನು ನಾಶಮಾಡತಕ್ಕ ಶ್ರೀ ಅರಹಂತದೇವರ ಸರ್ವಭಾಷೆಗಳಲ್ಲಿ ಪರಿಣತವಾಗುವ ವಚನವನ್ನು ೧೨ಯೋಜನ ವಿಸ್ತಾರವುಳ್ಳ ಕ್ಷೇತ್ರದಲ್ಲಿ ಹರಡಿಸುತ್ತಾರೆ. ಸಮವಸರಣದ ವಿಸ್ತಾರವು ೧೨ಯೋಜನಪ್ರಮಾಣವಾಗಿದೆ. ಈ ಎಲ್ಲಾ ಕ್ಷೇತ್ರಗಳಲ್ಲಿ ಅರಹಂತದೇವರ ವಚನವು ಕೇಳಬರುತ್ತದೆ. ಇದು ಅರ್ಧಮಾಗಧೀ ಎಂಬ ದೇವತೆಗಳಿಂದ ಮಾಡಲ್ಪಡುವ ಮೊದಲನೇ ಅತಿಶಯವು.

**ತ್ವತ್ಸಾನ್ನಿಧ್ಯಾನ್ಮೃಗಾಃ ಸರ್ವೇ ವೈರಂ ಜಹತಿ ಜನ್ಮನಃ ।**
**ಪುತ್ರಬುದ್ಧ್ಯಾ ಸ್ಪೃಶದ್ವ್ಯಾಘ್ರೀ ಮೃಗಂ ವ್ಯಾಘ್ರಂ ಮೃಗೀ ತಥಾ ॥**

ಅರ್ಥ—ಹೇ ಸ್ವಾಮಿ! ನಿಮ್ಮ ಸಾನ್ನಿಧ್ಯದಲ್ಲಿ ಎಲ್ಲಾ ಜೀವಗಳು ತನ್ನ ಜನ್ಮಜಾತ ವೈರವನ್ನು ಬಿಡುತ್ತವೆ. ಹೆಣ್ಣುಹುಲಿಯು ತನ್ನ ಪುತ್ರನೆಂದು ತಿಳಿದು ಜಿಂಕೆಯ ಮರಿಯನ್ನು ಪ್ರೀತಿಸುತ್ತದೆ. ಹೆಣ್ಣು ಜಿಂಕೆಯು

ತನ್ನ ಮಗನೆಂದು ಹುಲಿಯು ಮರಿಯನ್ನು ಪ್ರೀತಿಸುತ್ತದೆ. ಇದು ಎಲ್ಲಾ ಜೀವಗಳಲ್ಲಿ ಪರಸ್ಪರಮಿತ್ರತ್ವವೆಂಬ ಎರಡನೇ ಅತಿಶಯುವಾಗಿದೆ.

**ತ್ವಜ್ಜನ್ಮನಃ ಪ್ರಭಾವಾದ್ಧಿ ತ್ರೈಲೋಕ್ಯೇ ಸುಖಿನೋಽಭವನ್ ।**
**ಪ್ರಾಣಿನೋ ನಾರಕಾದ್ಯಾ ವೈ ಇತಿ ಜಾತಾ ದಿಶೋಽಮಲಾಃ ॥ ೩೪ ॥**

ಅರ್ಥ—ಹೇ ಜಿನೇಶ್ವರ! ನಿಮ್ಮ ಜನ್ಮದ ಮಹಿಮೆಯಿಂದ ಮೂರು ಲೋಕದ ಜೀವಗಳು ಆ ಸಮಯದಲ್ಲಿ ಸುಖಿಗಳಾದರು. ಇಲ್ಲಿಯ ವರೆಗೆ ಅಂದರೆ ನಿರಂತರ ದುಃಖವನ್ನನುಭವಿಸುವ ನಾರಕೀಜೀವಗಳು ಕೂಡಾ ಆ ಕಾಲದಲ್ಲಿ ಸುಖವನ್ನನುಭವಿಸಿದ್ದರು. ಇದನ್ನು ತಿಳಿದೇ ಕೇವಲಜ್ಞಾನವಾಗಲು ಎಲ್ಲಾ ದಿಕ್ಕುಗಳು ನಿರ್ಮಲವಾಗುತ್ತವೆ. ಇದು ದಿಕ್ಕುಗಳ ನಿರ್ಮಲತೆ ಎಂಬ ದೇವಕೃತ ಮೂರನೇ ಅತಿಶಯುವು.

**ಪ್ರಭೌ ತಿಷ್ಠತಿ ನಾಜ್ಞಾನಂ ತಿಷ್ಠೇದತ್ರ ಕ್ವ ದುರ್ದಿನಂ ।**
**ದೂರತೋ ವಿರಜೋ ಜಾತಂ ನಿರಭ್ರಂ ನಿರ್ಮಲಂ ನಭಃ ॥ ೩೫ ॥**

ಅರ್ಥ—ಶ್ರೀ ಅರಹಂತದೇವರಿರುತ್ತಿರಲು ಸ್ವಲ್ಪವೂ ಅಜ್ಞಾನವು ಇರುವುದಿಲ್ಲ. ಆಗ ಆ ಸ್ಥಾನದಲ್ಲಿ ದುರ್ದಿನ (ಮೋಡಗಳಿಂದ ಕೂಡಿದ ಆಕಾಶ) ಹೇಗಿರುವುದು? ಇದನ್ನರಿತೇ ಅಲ್ಲಿಯ ಆಕಾಶ ಧೂಳು ಮತ್ತು ಮೋಡವಿಲ್ಲದೇನೇಯೋ ನಿರ್ಮಲವಾಯಿತು. ಇದು ಆಕಾಶದ ನಿರ್ಮಲತ್ವವೆಂಬ ನಾಲ್ಕನೇ ಅತಿಶಯುವು.

**ತರವಸ್ತ್ವತ್ಪ್ರಭಾವಾದ್ಧಿ ಸರ್ವರ್ತುಫಲಪುಷ್ಪದಾಃ ।**
**ಸುಂದರಾಃ ಸುಪ್ರಿಯಾ ಜಾತಾಃ ಸರ್ವಮಂಗಲಕಾರಕಾ: ॥ ೩೬ ॥**

ಅರ್ಥ—ಹೇ ಭಗವನ್ ನಿಮ್ಮ ಮಹಿಮೆಯಿಂದ ಅಲ್ಲಿಯ ಮರಗಳೆಲ್ಲವೂ ಎಲ್ಲಾ ಋತುಗಳ ಫಲಪುಷ್ಪವನ್ನು ಕೊಡುವಂತಹದಾಗಿವೆ. ಮನೋಹರವಾಗಿಯೂ ಅತಿಪ್ರಿಯವಾಗಿಯೂ ಮತ್ತು ಎಲ್ಲ ಬಗೆಯ ಮಂಗಲವನ್ನುಂಟು ಮಾಡುವಂತಹದಾಗಿಯೂ ಆಗಿವೆ. ಆರು ಋತುಗಳ ಫಲ—ಪುಷ್ಪ ಧಾನ್ಯಗಳು ಒಂದೇ ಸವನೆ ವಿಕಸಿತವಾಗಿ ಆಗುವುದು ದೇವಕೃತ ಐದನೇ ಅತಿಶಯುವು.

**ಏಕಯೋಜನಮಾತ್ರಾ ತು ಹ್ಯಾಸೀದ್ರತ್ನಮಯೀ ಮಹೀ।**
**ದಿವ್ಯಾ ಸ್ಫಟಿಕವಚ್ಛುದ್ಧಾ ತ್ವತ್ಪ್ರಸಾದಾನ್ಮನೋಹರಾ ॥ ೩೭ ॥**

ಅರ್ಥ—ಹೇ ಸ್ವಾಮಿ! ನಿಮ್ಮ ಪ್ರಸಾದದಿಂದ ಒಂದು ಯೋಜನ ವಿಸ್ತಾರವುಳ್ಳ ಸಮವಸರಣಭೂಮಿಯು ರತ್ನಮಯವಾಗಿ ಆಯಿತು. ಹಾಗೇನೇಯೇ ನಿರ್ಮಲ ಸ್ಫಟಿಕಶಿಲೆಗೆ ಸಮಾನವಾಗಿ ಶುದ್ಧ ಮತ್ತು ಸುಂದರವಾಗಿ ಆಯಿತು. ಒಂದು ಯೋಜನದ ವರೆಗಿರುವ ಸಮವಸರಣ ಭೂಮಿಯು ಕನ್ನಡಿಗೆ ಸಮಾನವಾಗಿ ನಿರ್ಮಲವಾಗುವುದು. ಇದು ದೇವ ಕೃತ ಆರನೇ ಅತಿಶಯವು.

**ತ್ವತ್ಪಾದಯೋರ್ಹಿ ಸಾನ್ನಿಧ್ಯಾತ್ಪ್ರಾಪ್ತಂ ಹೇಮಮಯಂ ವಪುಃ।**
**ಜ್ಞಾತ್ವಾSಚಿಂತ್ಯಂ ಫಲಂ ಭಕ್ತೇಸ್ತಲೇ ತಿಷ್ಠತಿ ನೀರಜಂ ॥ ೩೮ ॥**

ಅರ್ಥ—ಎಲೈ ಸ್ವಾಮಿಯೇ! ನಿನ್ನ ಚರಣಕಮಲಗಳ ಸಂಬಂಧ ದಿಂದ ಕಮಲಪುಷ್ಪಗಳ ಶರೀರವೂ ಬಂಗಾರಮಯವಾಗಿ ಆಯಿತು. ಇದನ್ನು ನೋಡಿ ಆ ಪುಷ್ಪಗಳು ತನ್ನ ಅಪರಿಮಿತಭಕ್ತಿಯ ಅಪೂರ್ವಫಲ ವನ್ನನುಭವಿಸಿ ಅವು ನಿಮ್ಮ ಪಾದಕಮಲಗಳ ಕೆಳಗೇನೇಯೇ ಇರಲಾರಂಭಿ ಸಿದುವು. ಜಿನೇಂದ್ರದೇವರ ಗಮನದ ಸಮಯದಲ್ಲಿ ಅವರ ಪಾದಗಳ ಕೆಳಗೆ ದೇವತೆಗಳು ಬಂಗಾರದ ಕಮಲವನ್ನು ಮಾಡುತ್ತಾರೆ. ಇದು ದೇವ ಕೃತ ಏಳನೇ ಅತಿಶಯುವು.

**ಸರ್ವೇ ಜಯಧ್ವನಿಂ ದೇವಾಃ ಕುರ್ವಂತಿ ಗಗನಾಂಗಣೇ।**
**ಶಾಂತಿದಂ ಶ್ರೀಪ್ರಭುಂ ಸರ್ವೇ ನಮಂತ್ವಿತಿ ಕೃತೇರಣಾಃ ॥ ೩೯ ॥**

ಅರ್ಥ—ಸಮವಸರಣದ ಮೇಲೆ ಆಕಾಶವೆಂಬ ಅಂಗಣದಲ್ಲಿ ಎಲ್ಲಾ ದೇವತೆಗಳು "ಜಯ ಜಯಕಾರವ"ನ್ನು ಮಾಡುತ್ತಾರೆ. ಆ ಸಮಯದಲ್ಲಿ ದೇವತೆಗಳಿಂದ ಮಾಡುವ ಆ ಜಯಕಾರ ಶಬ್ದವು "ಎಲೇ ಭವ್ಯಜೀವರು ಗಳೇ! ಶ್ರೀ.ಅರಹಂತದೇವರೇ ಸಂಸಾರದಲ್ಲಿ ಶಾಂತಿಯನ್ನು ಕೊಡುವವರು. ಆದುದರಿಂದ ನೀವೆಲ್ಲಾ ಇವರಿಗೇನೇಯೇ ಬಂದು ನಮಸ್ಕರಿಸಿರಿ" ಎಂಬ ಪ್ರೇರೇಪಣೆಯನ್ನು ಮಾಡುವಂತೆ ಕಾಣುತ್ತದೆ. ಆಕಾಶದಲ್ಲಿ ಜಯಕಾರ ಶಬ್ದವಾಗುವುದು ದೇವನಿರ್ಮಿತ ಎಂಟನೇ ಅತಿಶಯವು.

**ತ್ವತ್ಪ್ರಸಕ್ತೇಃ ಸುಗಂಧಾನಾಂ ಪುರೋ ಭಾತಿ ಸುಗಂಧಿದಃ ।**
**ಪವನಶ್ಚಾವಹತ್ಸಿಂಧೋರಿವ ಭಂಗೋ ಮನೋಹರಃ ॥ ೪೦ ॥**

ಅರ್ಥ—ಭಗವಂತನೇ! ನಿಮ್ಮ ಸಂಬಂಧದಿಂದ ಸುಹಾಸನೆಯು ನೆರೆ ಎಂಬಂತಿರುವ ಸುವಾಸನೆಯನ್ನು ಬೀರತಕ್ಕ ಸುಮನೋಹರ ಗಾಳಿಯು ಬರುತ್ತದೆ. ಅದು ಸುವಾಸನಿಯಿಂದೊಡಗೂಡಿದ ಶೋಭಾಯಮಾನವಾದ ಸಮುದ್ರದ ಅಲೆಗಳೆಂಬಂತೆ ಕಾಣುತ್ತದೆ. ಇದು ಮಂದಸುಗಂಧಸಂಚಾರವೆಂಬ ಒಂಭತ್ತನೇ ಅತಿಶಯವು.

**ಇಂದ್ರಸ್ಯಾನುಜ್ಞಯಾ ದೇವೈಃ ಕೃತಾನಂದವಿಧಾಯಿನೀ ।**
**ಗಂಧೋದಕಮಯೀ ವೃಷ್ಟಿಃ ಸಂಸಾರಾತಪಹಾರಿಣೀ ॥ ೪೧ ॥**

ಅರ್ಥ—ಶ್ರೀ ಅರಹಂತದೇವರ ಸಮವಸರಣದಲ್ಲಿ ಇಂದ್ರನ ಆಜ್ಞೆಯಿಂದ ದೇವತೆಗಳಿಂದ ಮಾಡಲ್ಪಡುವುದೂ ಮತ್ತು ಸಂಸಾರದ ಸಂತಾಪವನ್ನು ದೂರಮಾಡುವುದೂ ಎಲ್ಲಾ ಜೀವಗಳಿಗೂ ಆನಂದದಾಯಕವಾದುದೂ ಆದ ಗಂಧೋದಕವೃಷ್ಟಿಯಾಗುವುದು ಹತ್ತನೇ ಅತಿಶಯವು.

**ತ್ವತ್ಪ್ರಭಾವಾನ್ಮಹೀ ದೇವೈರ್ನಿಷ್ಕಂಟಕನಿರಾಮಯಾ ।**
**ವಾಲುಕಾ ಧೂಲಿನಿರ್ಮುಕ್ತಾ ದಿಶಶ್ಚ ವಿಮಲೀಕೃತಾಃ ॥ ೪೨ ॥**

ಅರ್ಥ—ಎಲೈ ಭಗವಂತನೇ! ನಿಮ್ಮ ಮಹಿಮೆಯಿಂದ ಪವನಕುಮಾರಜಾತಿಯ ದೇವತೆಗಳು ಅಲ್ಲಿಯ ಭೂಮಿಯನ್ನು ಮುಳ್ಳುಗಳಿಲ್ಲದುದನ್ನಾಗಿಯೂ, ರೋಗಬಾಧೆಗಳಿಂದ ರಹಿತವಾದುದನ್ನಾಗಿಯೂ, ಹೊಯಿಗೆ ಮತ್ತು ಧೂಳುವಿನಿಂದ ರಹಿತವಾದುದನ್ನಾಗಿಯೂ ಮಾಡುತ್ತಾರೆ. ಇದರಿಂದಾಗಿ ದಿಕ್ಕುಗಳು ಅತ್ಯಂತನಿರ್ಮಲವಾಗುತ್ತವೆ. ಇದು ಧೂಲಿಕಂಟಕರಹಿತವೆಂಬ ಹನ್ನೊಂದನೇ ಅತಿಶಯವು.

**ತ್ವತ್ಸಮೀಪಾಜ್ಜನಾನಾಂ ಹಿ ಜಾತಾ ಪರಿಣತಿಃ ಶುಭಾ ।**
**ಪರಮಾನಂದಸಂದೋಹಾ ಹೃದಯಾಹ್ಲಾದಕಾರಿಣೀ ॥ ೪೩ ॥**

ಅರ್ಥ—ಎಲೈ ಸ್ವಾಮಿಯೇ! ನಿಮ್ಮ ಸಂಬಂಧದಿಂದ ಜನರ ಪರಿಣಾಮವು ಅತಿಶುಭವಾಗಿಯೂ, ಆನಂದಸ್ವರೂಪವಾಗಿಯೂ ಮತ್ತು ಆಹ್ಲಾದವನ್ನುಂಟುಮಾಡತಕ್ಕದ್ದಾಗಿಯೂ ಆಗುತ್ತದೆ. ಎಲ್ಲಾ ಜೀವಗಳು ಪ್ರಸನ್ನರಾಗುವುದು ಹನ್ನೆರಡನೇ ಅತಿಶಯವು.

**ಅರ್ಹತ್ಪುರೋ ಧರ್ಮಚಕ್ರಂ ಚಚಾಲಾಧರ್ಮನಾಶಕಂ ।**
**ಸಹಸ್ರಾರೈಃ ಸದಾ ಯುಕ್ತಂ ಸ್ವಚ್ಛಂ ಬಿಂಬಂ ರವೇರಿವ ॥ ೪೪ ॥**

ಅರ್ಥ—ಶ್ರೀ ಅರಹಂತದೇವರ ಮುಂದುಗಡೆ ನಿರಂತರ ಧರ್ಮಚಕ್ರದ ಶ್ರೀವಿಹಾರವಾಗುತ್ತದೆ. ಆ ಧರ್ಮಚಕ್ರವು ಅಧರ್ಮವನ್ನು ನಾಶಮಾಡುವಂತಹದಾಗಿಯೂ ಮತ್ತು ಒಂದುಸಾವಿರ ಧಾರೆಗಳಿಂದ ಕೂಡಿದುದಾಗಿಯೂ ಇರುತ್ತದೆ. ಮತ್ತು ಸೂರ್ಯಬಿಂಬಕ್ಕೆ ಸಮಾನವಾಗಿ ಸ್ವಚ್ಛಮತ್ತು ಪ್ರಕಾಶಮಾನವಾಗಿರುತ್ತದೆ. ಧರ್ಮಚಕ್ರವು ಮುಂದೆ ಹೋಗುವುದೆಂಬ ಹದಿಮೂರನೇ ಅತಿಶಯವು.

**ದ್ರವ್ಯಾಣಿ ಮಂಗಲಾನ್ಯಷ್ಟೌ ವ್ಯಜನಂ ಝಾರಿಕಾ ತಥಾ ।**
**ಕಲಶಃ ಸ್ವಸ್ತಿಕಂ ಛತ್ರಂ ಚಾಮರಂ ದರ್ಪಣಂ ಧ್ವಜಾಃ ॥ ೪೫ ॥**

ಅರ್ಥ—ಶ್ರೀ ಅರಹಂತದೇವರ ಎದುರುಗಡೆ ಬೀಸಣಿಗೆ, ಗಿಂಡಿ, ಕಲಶ, ಸ್ವಸ್ತಿಕ, ಛತ್ರ, ಚಾಮರ, ಕನ್ನಡಿ, ಮತ್ತು ಧ್ವಜಗಳೆಂಬ ಎಂಟು ಮಂಗಲದ್ರವ್ಯಗಳಿರುತ್ತವೆ. ಈ ಎಂಟು ಮಂಗಲದ್ರವ್ಯಗಳಿರುವುದು ಹದಿನಾಲ್ಕನೇ ಅತಿಶಯವು.

**ವಿನಾಶಕಾ ನೃಣಾಂ ವ್ಯಾಧೇಃ ಸುರೋತ್ಪನ್ನಾಶ್ಚತುರ್ದಶ ।**
**ಆನಂದಕಾರಕಾ ವಿಶ್ವೇऽತಿಶಯಾ ಇತಿ ವರ್ಣಿತಾಃ ॥ ೪೬ ॥**

ಅರ್ಥ—ಅಸಾರ ಸಂಸಾರದಲ್ಲಿ ಮನುಷ್ಯರ ರೋಗಗಳನ್ನು ದೂರಗೊಳಿಸುವುದೂ, ಎಲ್ಲರಿಗೂ ಆನಂದವನ್ನೀಯುವುದೂ ಮತ್ತು ದೇವತೆಗಳಿಂದ ಮಾಡಲ್ಪಡುವವುಗಳಾದ ಹದಿನಾಲ್ಕು ಅತಿಶಯಗಳಾಗಿರುತ್ತವೆ. ಮೇಲೆ ಅವುಗಳ ವರ್ಣನೆಯನ್ನು ನಾನು ಮಾಡಿರುವೆನು.

**ಏವಂ ಸಮುದಿತಾಃ ಸರ್ವೇ ಚತುಸ್ತ್ರಿಂಶತ್ಪ್ರಮಾಣಕಾಃ ।**
**ಅರ್ಹತೋऽತಿಶಯಾಃ ಸರ್ವೇ ದುಃಖದಾರಿದ್ರ್ಯನಾಶಕಾಃ ॥ ೪೭ ॥**

ಅರ್ಥ—ಈ ಪ್ರಕಾರ ಶ್ರೀ ಅರಹಂತದೇವರಿಗೆ ೩೪ ಅತಿಶಯಗಳಾಗುತ್ತವೆ. ಅವೆಲ್ಲವೂ ಎಲ್ಲಾ ದುಃಖಗಳನ್ನೂ ಮತ್ತು ದಾರಿದ್ರ್ಯವನ್ನೂ ನಾಶಮಾಡತಕ್ಕವುಗಳಾಗುತ್ತವೆ.

# ಎಂಟು ಪ್ರಾತಿಹಾರ್ಯಗಳು.

**ಪ್ರಾತಿಹಾರ್ಯಾಣಿ ಕಥ್ಯಂತೇ ಹ್ಯಷ್ಟೌ ಸುಖಕರಾಣಿ ವೈ।**
**ಭವ್ಯಭಾನೋಃ ಕ್ಷಮಾಸಿಂಧೋಃ ಪುಣ್ಯಮೂರ್ತೇರ್ಜಿನೇಶಿನಃ॥೪೮**

ಅರ್ಥ—ಅರಹಂತದೇವರು ಭವ್ಯಜೀವಗಳೆಂಬ ಕಮಲಗಳನ್ನು ಅರಳಿಸುವುದಕ್ಕೆ ಸೂರ್ಯನೋಪಾದಿಯಲ್ಲಿರುವವರಾಗಿರುವರು. ಅವರು ಕ್ಷಮಾಗುಣಕ್ಕೆ ಸಮುದ್ರದಂತಿರುವರು. ಮತ್ತು ಪುಣ್ಯಮೂರ್ತಿಗಳು. ಅವರಿಗೆ ಎಲ್ಲಾ ಜೀವಗಳಿಗೆ ಸುಖವನ್ನು ಕೊಡತಕ್ಕ ಎಂಟು ಪ್ರಾತಿಹಾರ್ಯಗಳಾಗುತ್ತವೆ. ಮುಂದೆ ಅವುಗಳ ವರ್ಣನೆಯನ್ನು ಮಾಡಲಾಗುತ್ತದೆ.

**ಅಶೋಕೋ ಜಾಯತೇ ಯಸ್ಯ ಪಾದಪಂಕಜಸೇವನಾತ್ ।**
**ವೃಕ್ಷೋಽಪಿ ಭವ್ಯಜೀವಾಸ್ತು ಭವಂತ್ಯೇವ ನ ಸಂಶಯಃ॥ ೪೯ ॥**
**ವೃಕ್ಷೋಽಹ್ಯಶೋಕನಾಮೇದಂ ಪ್ರಥಮಂ ಪ್ರಾತಿಹಾರ್ಯಕಂ।**
**ಸರ್ವಶೋಕಹರಂ ಭವ್ಯಜೀವಾನಾಂ ವಾಂಛಿತಪ್ರದಂ ॥ ೫೦ ॥**

ಅರ್ಥ—ಎಲೈ ಭಗವಂತನೇ! ನಿಮ್ಮ ಪಾದಕಮಲಗಳ ಸೇವೆಯಿಂದ ವೃಕ್ಷವೂ ಕೂಡಾ ಶೋಕರಹಿತನಾಗಿಯಾಗುವುದಾದರೆ ಭವ್ಯಜೀವರು ನಿಮ್ಮ ಪಾದಕಮಲಗಳ ಸೇವೆಯಿಂದ ಶೋಕರಹಿತರಾಗುದರಲ್ಲಿ ಯಾವ ಸಂಶಯವೂ ಇಲ್ಲ. ಅರಹಂತದೇವರ ಹಿಂದೆ ಅಶೋಕವೃಕ್ಷವಿರುವುದು ಮೊದಲನೇ ಪ್ರಾತಿಹಾರ್ಯವು. ಈ ಅಶೋಕವೃಕ್ಷವು ಎಲ್ಲಾ ಶೋಕಗಳನ್ನು ದೂರಮಾಡುವಂತಹದಾಗಿಯೂ ಮತ್ತು ಭವ್ಯಜೀವಗಳಿಗೆ ಇಚ್ಛಿತಫಲವನ್ನು ಕೊಡುವಂತಹದಾಗಿಯೂ ಆಗಿರುತ್ತದೆ.

**ಭಾಗ್ಯಹೀನಜನಾಲಭ್ಯಂ ನಿತಾಂತೈಶ್ವರ್ಯಸೂಚಕಂ।**
**ದಿವ್ಯಂ ಸ್ತುತ್ಯಂ ಪ್ರಭಾಪುಂಜಂ ಜಾತಂ ಸಿಂಹಾಸನಂ ಪ್ರಭೋಃ॥೫೧**

ಅರ್ಥ—ಶ್ರೀ ಅರಹಂತದೇವರ ಸಿಂಹಾಸನವು ಭಾಗ್ಯಹೀನಜನರಿಗೆ ಅಲಭ್ಯವಾದದ್ದು. ಅದು ಅತ್ಯಧಿಕಸಂಪತ್ತನ್ನು ಸೂಚಿಸುವಂತಹದಾಗಿಯೂ, ದೇವನಿರ್ಮಿತವಾಗಿಯೂ, ಸ್ತುತಿಸುವುದಕ್ಕೆ ಯೋಗ್ಯವಾಗಿಯೂ, ಕಾಂತಿಸಮೂಹವುಳ್ಳದ್ದಾಗಿಯೂ ಇರುತ್ತದೆ. ಇದು ಶ್ರೀ ಭಗವಂತನ ಎರಡನೇ ಪ್ರಾತಿಹಾರ್ಯವು.

**ಸೂರ್ಯಚಂದ್ರಮಸೌ ತಸ್ಯ ವಪುಃಕಾಂತ್ಯಾ ಪರಾಜಿತೌ ।**
**ಛತ್ರತ್ರಯಮಿಷಾತ್ತೌ ಚ ತ್ರಯೋ ಭೂತ್ವಾ ಸದಾ ಸ್ಥಿತೌ ॥ ೩೨ ॥**

ಅರ್ಥ—ಶ್ರೀ ಅರಹಂತದೇವರ ದೇಹದ ಪ್ರಭೆಯಿಂದ ಸೂರ್ಯ ಚಂದ್ರರು ಜಯಿಸಲ್ಪಟ್ಟಿದ್ದರು. ಆದುದರಿಂದ ಆ ಸೂರ್ಯಚಂದ್ರರೇ ಮುಕ್ಕೊಡೆಯ ನೆವದಿಂದ ಅರಹಂತರ ಸೇವೆಯಲ್ಲಿ ತಲ್ಲೀನರಾಗಿರುತ್ತಿದ್ದರು. ಅಂದರೆ ಮುಕ್ಕೊಡೆ ಎಂಬುದು ಮೂರನೇ ಪ್ರಾತಿಹಾರ್ಯವು.

**ಭಾಮಂಡಲಪ್ರಭಾಪೂರೈಃ ಶೋಭತೇ ಮೋಕ್ಷದಾಯಕಃ ।**
**ಪೂರ್ವಾಚಲೇ ಯಥಾ ಸೂರ್ಯಃ ಸಹಸ್ರಕಿರಣೈರ್ವರೈಃ ॥ ೩೩ ॥**

ಅರ್ಥ—ಹೇಗೆ ಉದಯಗಿರಿ ಪರ್ವತದಲ್ಲಿ ತನ್ನ ಶುಭ್ರವಾದ ಸಾವಿರಾರು ಕಿರಣಗಳಿಂದ ಸೂರ್ಯನು ಶೋಭಿಸುವನೋ ಹಾಗೇನೇಯೇ ಭವ್ಯ ಜೀವರುಗಳಿಗೆ ಮೋಕ್ಷವನ್ನು ಕೊಡತಕ್ಕ ಅರಹಂತದೇವರು ತನ್ನ ಭಾಮಂಡಲದ ಪ್ರಭೆಯಿಂದ ಅತಿ ಮನೋಹರವಾಗಿ ಶೋಭಿಸುತ್ತಾರೆ. ಭಾಮಂಡಲ ವೆಂಬುದು ನಾಲ್ಕನೆಯ ಪ್ರಾತಿಹಾರ್ಯವು.

**ಸರ್ವಭಾಷಾಮಯೋ ದಿವ್ಯಧ್ವನಿಃ ಸ್ವರ್ಮೋಕ್ಷದಾಯಕಃ ।**
**ಶಿಖಿನಾಂ ಮೇಘವದ್ಯೋಽಭೂದ್ಭವ್ಯಾನಾಂ ಕ್ಲೇಶಶಾಂತಯೇ ॥ ೩೪ ॥**

ಅರ್ಥ—ಹೇಗೆ ಮೋಡವು ಮಳೆ ಸುರಿಸುವುದರಿಂದ ನವಿಲುಗಳ ಕ್ಲೇಶವನ್ನು ದೂರ ಮಾಡುತ್ತದೆಯೋ ಅದೇ ಪ್ರಕಾರ ಭವ್ಯಜೀವರುಗಳ ಎಲ್ಲಾ ದುಃಖವನ್ನು ದೂರಗೊಳಿಸುವ, ಸ್ವರ್ಗಮೋಕ್ಷವನ್ನು ಕೊಡುವ ಮತ್ತು ಸರ್ವಭಾಷಾ ಸ್ವರೂಪಿಯಾದ ದಿವ್ಯಧ್ವನಿಯು ಹೊರಡುತ್ತದೆ. ಇದು ಐದನೇ ಪ್ರಾತಿಹಾರ್ಯವು.

**ಪುಷ್ಪವೃಷ್ಟಿಃ ಸುರೈರ್ಮುಕ್ತಾ ಪತಿತಾ ಶಾಂತಿದಾ ದಿವಃ ॥**
**ದೇವೈರ್ಭಕ್ತ್ಯಾ ಕೃತಾ ಪೂಜಾ ಶ್ರೀಪತೇರ್ಯಶಸಾಂ ತತಿಃ ॥ ೩೫ ॥**

ಅರ್ಥ—ಶ್ರೀ ಅರಹಂತದೇವರ ಸಮವಸರಣದಲ್ಲಿ ದೇವತೆಗಳಿಂದ ಮಾಡಲ್ಪಡುವ, ಭವ್ಯಜೀವರುಗಳಿಗೆ ಶಾಂತಿ-ಸುಖವನ್ನು ಕೊಡುವ ಪುಷ್ಪವೃಷ್ಟಿಯು ಯಾವಾಗಲೂ ಆಕಾಶದಿಂದ ಬೀಳುತ್ತಿರುತ್ತದೆ. ಅದನ್ನು

ನೋಡುವಾಗ ದೇವತೆಗಳು ಬಹು ಭಕ್ತಿಯಿಂದ ಪೂಜೆ ಮಾಡುತ್ತಾರೋ ಅಥವಾ ಶ್ರೀ ಅರಹಂತದೇವರ ಕೀರ್ತಿಗಳ ಪಂಕ್ತಿಯು ಮೇಲಿಂದ ಬೀಳುತ್ತದೆಯೋ ಎಂಬಂತೆ ಕಾಣುತ್ತದೆ. ಪುಷ್ಪವೃಷ್ಟಿಯು ಆರನೇ ಪ್ರಾತಿಹಾರ್ಯವು.

ಚತುಃಷಷ್ಟಿಪ್ರಮಾಣೈರ್ಹಿ ಯಕ್ಷೈಶ್ಚಾಲಿತಚಾಮರೈಃ ।
ತರಂಗೈರಿವ ದುಗ್ಧಾಬ್ಧೇ ರರಾಜ ಜಿನನಾಯಕಃ ॥ ೫೬ ॥

ಅರ್ಥ—ಯಕ್ಷಜಾತಿಯ ದೇವತೆಗಳು ಶ್ರೀ ಅರಹಂತದೇವರ ಉಭಯ ಪಾರ್ಶ್ವಗಳಲ್ಲಿ ೬೪ ಚಾಮರಗಳನ್ನು ಬೀಸುತ್ತಾರೆ. ಈ ಚಾಮರಗಳಿಂದ ಮೂರು ಲೋಕದ ಅಧಿಪತಿಯಾದ ಅರ್ಹತ್ಪರಮೇಶ್ವರರು ಸೇವೆಗಾಗಿ ಬಂದ ಕ್ಷೀರ ಸಮುದ್ರದ ಅಲೆಗಳಿಂದ ಕೂಡಿರುವರೋ ಎಂಬಂತೆ ಹೆಚ್ಚಿನ ಶೋಭಾಯಮಾನರಾಗಿ ತೋರುತ್ತಾರೆ. ೬೪ ಚಾಮರಗಳು ಏಳನೇ ಅತಿಶಯವು.

ದೇವೇಶ್ವರೈಃ ಸದಾ ವಂದ್ಯೇ ಭವಕ್ಲೇಶವಿನಾಶಿನಿ ।
ಸ್ನಾನಂ ಕುರ್ಯುಃ ಪ್ರಭೋಸ್ತೀರ್ಥೇ ದುಂದುಭಿರ್ಧ್ವನತೀತಿ ಖೇ ॥

ಅರ್ಥ—ಶ್ರೀ ಅರ್ಹತ್ಪರಮೇಶ್ವರರೆಂಬ ತೀರ್ಥವು ಇಂದ್ರಾದಿ ದೇವತೆಗಳಿಂದ ವಂದಿಸುವುದಕ್ಕೆ ಯೋಗ್ಯವಾಗಿದೆ. ಸಂಸಾರದ ದುಃಖ-ಪೀಡೆಗಳನ್ನು ದೂರಗೊಳಿಸುವಂಥಾದ್ದು. ಆದುದರಿಂದ ಆ ತೀರ್ಥದಲ್ಲಿ ಎಲ್ಲಾ ಭವ್ಯಜೀವರುಗಳು ನಿರಂತರ ಸ್ನಾನ ಮಾಡಬೇಕೆಂಬುದಕ್ಕೆ ಸೂಚನೆಯನ್ನು ಕೊಡುವೋಪಾದಿಯಲ್ಲಿ ದುಂದುಭಿವಾದ್ಯವು ಆಕಾಶದಲ್ಲಿ ಮೊಳಗುತ್ತದೆ. ಸಮವಸರಣದ ಮೇಲೆ ಆಕಾಶದಲ್ಲಿ ದೇವದುಂದುಭಿಯಾಗುವುದು ೮ ನೇ ಪ್ರಾತಿಹಾರ್ಯವು.

ಇತ್ಯಷ್ಟಪ್ರಾತಿಹಾರ್ಯಾಣಾಂ ರಚನಾ ವಿಶ್ವಮೋಹಿನೀ ।
ಸ್ತುತಾ ಭಕ್ತ್ಯಾ ಸದಾನಂದದಾಯಿನೀ ಹಿ ಜಗತ್ಪತೇಃ ॥ ೫೮ ॥

ಅರ್ಥ—ಈ ಪ್ರಕಾರ ಶ್ರೀ ಅರ್ಹತ್ಪರಮೇಶ್ವರರ ಎಂಟು ಪ್ರಾತಿಹಾರ್ಯಗಳ ರಚನೆಯು ಸರ್ವಲೋಕವನ್ನು ಮೋಹಗೊಳಿಸುವಂತಹುದಾಗಿದೆ. ನಿರಂತರ ಆನಂದವನ್ನು ಕೊಡುವುದಾಗಿದೆ. ಆ ಪ್ರಾತಿಹಾರ್ಯಗಳ ಸ್ತೋತ್ರವನ್ನು ನಾನು ಭಕ್ತಿಯ ಮೂಲಕ ರಚಿಸಿರುವೆನು.

## ಅನಂತ ಚತುಷ್ಟಯಗಳು.

**ವರ್ಣ್ಯತೇ ಹ್ಯಧುನಾ ನೂನಂ ಚತುಷ್ಟಯಮನಂತಕಂ ।**
**ಘಾತಿಕರ್ಮಕ್ಷಯಾಜ್ಜಾತಂ ಕೇವಲಜ್ಞಾನಸೂಚಕಂ ॥ ೫೯ ॥**
**ಅನಂತದರ್ಶನಂ ಜ್ಞಾನಮನಂತಸುಖಪೂರಿತಂ ।**
**ಅನಂತವೀರ್ಯಸಹಿತಂ ಸರ್ವಕ್ಲೇಶವಿದೂರಕಂ ॥ ೬೦ ॥**

ಅರ್ಥ—ಇನ್ನು ಮುಂದೆ ಶ್ರೀ ಅರಹಂತ ಪರಮೇಷ್ಠಿಗಳ ಅನಂತ ಚತುಷ್ಟಯ ಗುಣಗಳ ವರ್ಣನೆಯನ್ನು ಮಾಡಲಾಗುವುದು. ಎಲ್ಲಾ ಘಾತಿಕರ್ಮಗಳ ಸಂಪೂರ್ಣಕ್ಷಯ [ ನಾಶ ] ವಾದುದರಿಂದ ಅನಂತದರ್ಶನವೂ, ಅನಂತಜ್ಞಾನವೂ, ಅನಂತ ಸುಖವೂ ಮತ್ತು ಅನಂತ ವೀರ್ಯಗಳೆಂಬೀ ನಾಲ್ಕು ಅನಂತ ಗುಣಗಳು ಪ್ರಕಟವಾಗುತ್ತವೆ. ಇವು ಕೇವಲಜ್ಞಾನದ ಸೂಚನೆಯನ್ನು ಕೊಡುವಂಥವುಗಳಾಗಿಯೂ ಮತ್ತು ಸರ್ವಕ್ಲೇಶಗಳನ್ನು ದೂರ ಮಾಡುವಂತಹುಗಳೂ ಆಗಿವೆ.

**ಸರ್ವದರ್ಶನರೋಧಸ್ಯ ಕರ್ಮಣೋಽನಂತದರ್ಶನಂ ।**
**ಕ್ಷಯಾತ್ ಸ್ವಸುಖದಂ ಪ್ರಾಪ್ತಂ ಲೋಕಾಲೋಕಪ್ರದರ್ಶಕಂ ॥**

ಅರ್ಥ—ಶ್ರೀ ಅರಹಂತ ಪರಮೇಷ್ಠಿಗಳಿಗೆ ದರ್ಶನಾವರಣೀಯ ಕರ್ಮದ ಸಂಪೂರ್ಣ ನಾಶವಾಗೋಣದರಿಂದ ತನ್ನಾತ್ಮನಿಗೆ ಸುಖವನ್ನುಂಟುಮಾಡತಕ್ಕ ಮತ್ತು ಲೋಕ ಮತ್ತು ಅಲೋಕಗಳ ಸಮಸ್ತ ವಸ್ತುಗಳನ್ನು ನೋಡುವ ಅನಂತ ದರ್ಶನವುಂಟಾಗುತ್ತದೆ.

**ಕ್ಷಯಾದ್ಧಿ ಕರ್ಮಣೋ ಜ್ಞಾನಾವರಣಸ್ಯ ಜಗತ್ಪತೇಃ ।**
**ಅನಂತಜ್ಞಾನಮುಭವಲ್ಲೋಕಾಲೋಕಪ್ರಕಾಶಕಂ ॥ ೬೨ ॥**

ಅರ್ಥ—ಇದೇ ಪ್ರಕಾರವಾಗಿ ಅರ್ಹಂತದೇವರಿಗೆ ಜ್ಞಾನಾವರಣೀಯ ಕರ್ಮದ ಸರ್ವನಾಶದಿಂದ ಲೋಕ ಮತ್ತು ಅಲೋಕಗಳ ಎಲ್ಲಾ ವಸ್ತುಗಳನ್ನು ಏಕಕಾಲದಲ್ಲಿ ತಿಳಿಯುವ ಅನಂತ ಜ್ಞಾನವುಂಟಾಗುತ್ತದೆ.

**ಮೋಹಕರ್ಮಕ್ಷಯಾನ್ನೂನಂ ಶಾಂತಿದಂ ಕ್ಷಯವರ್ಜಿತಂ ।**
**ಅನಂತಸುಖಮಾಪನ್ನಂ ಸ್ಥಿರಂ ನಿರುಪಮಂ ಪ್ರಭೋಃ ॥೬೩॥**

ಅರ್ಥ—ಶ್ರೀಅರಹಂತ ದೇವರಿಗೆ ಮೋಹನೀಯ ಕರ್ಮ ಸಂಪೂರ್ಣನಾಶವಾಗುತ್ತದೆ. ಆದುದರಿಂದವರಿಗೆ ಪೂರ್ಣ ಸುಖವನ್ನು ಕೊಡುವಂತಹುದೂ,ಎಂದೂ ನಾಶವಾಗದಿರುವುದೂ,ಸದಾ ಸ್ಥಿರವಾಗಿರತಕ್ಕುದೂ ಮತ್ತು ಉಪಮೆಯಿಲ್ಲದುದೂ ಆದ ಅನಂತಸುಖವು ಉಂಟಾಗುತ್ತದೆ.

**ಕ್ಷಯಾದ್ವೀರ್ಯಮನಂತಂ ಹಿ ವೀರ್ಯರೋಧಕಕರ್ಮಣಃ ।**
**ದರ್ಶನಜ್ಞಾನಯೋಃ ಸ್ಥಾನಂ ಕ್ಷಾಯಿಕಂ ಹ್ಯಭವತ್ಪ್ರಭೋಃ ॥೬೪॥**

ಅರ್ಥ—ಅರ್ಹತ್ಪರಮೇಷ್ಠಿಗಳಿಗೆ ವೀರ್ಯಾಂತರಾಯ ಕರ್ಮವು ಸಂಪೂರ್ಣ ನಾಶವಾಗುವುದರಿಂದ ಅನಂತವೀರ್ಯವೆಂಬ ಕ್ಷಾಯಿಕ ಗುಣವುಂಟಾಗುತ್ತದೆ. ಈ ಅನಂತವೀರ್ಯವು ಅನಂತ ದರ್ಶನ-ಜ್ಞಾನಗಳ ಸ್ಥಾನವಾಗಿದೆ. ಯಾಕಂದರೆ ಅನಂತವೀರ್ಯವಿರುವುದರಿಂದಲೇನೇ ಅನಂತಜ್ಞಾನ-ದರ್ಶನಗಳಾಗುತ್ತವೆ. ಈ ಪ್ರಕಾರ ಜಿನೇಶ್ವರರಿಗೆ ಅನಂತದರ್ಶನವೂ, ಅನಂತಜ್ಞಾನವೂ, ಅನಂತಸುಖವೂ ಮತ್ತು ಅನಂತ ವೀರ್ಯಗಳೆಂಬ ನಾಲ್ಕು ಅನಂತಚತುಷ್ಟಯಗಳಾಗುತ್ತವೆ.

**ಪ್ರಾಗ್ಭವೇ ಷೋಡಶಾನಾಂ ಹಿ ಭಾವನಾನಾಂ ಪ್ರಭಾವತಃ ।**
**ಬದ್ಧಂ ತೀರ್ಥಂಕರತ್ವಂ ಹಿ ನಾಮ ಪುಣ್ಯಂ ಜಿನೇಶಿನಾ ॥ ೬೫ ॥**

ಅರ್ಥ—ಶ್ರೀಜಿನೇಂದ್ರದೇವರು ತನ್ನ ಪೂರ್ವಭವದಲ್ಲಿ ಷೋಡಶ ಕಾರಣಭಾವನೆಗಳನ್ನು ಭಾವಿಸುತ್ತಾರೆ. ಆ ಭಾವನೆಗಳ ಚಿಂತನೆಯಿಂದಲೆ ಮಹಾಪುಣ್ಯೋತ್ಪಾದಕ ತೀರ್ಥಂಕರ ನಾಮ ಕರ್ಮದ ಬಂಧವಾಗುತ್ತದೆ.

**ಏವಂ ತತ್ಪುಣ್ಯಯೋಗೇನಾಚಿಂತ್ಯಾಂ ಪೂತಾಂ ಮನೋಹರಾಂ ।**
**ಆಶ್ಚರ್ಯಕಾರಿಕಾಂ ಲೋಕೇ ವಿಭೂತಿಂ ಲಬ್ಧವಾನ್ ವಿಭುಃ ॥೬೬॥**

ಅರ್ಥ—ಆದುದರಿಂದಲೇ ಶ್ರೀಅರಹಂತದೇವರು ಆ ತೀರ್ಥಂಕರರ ನಾಮಕರ್ಮದ ಫಲೋದಯದಿಂದುಂಟಾಗುವ ಮಹಾಪುಣ್ಯದಿಂದ ಚಿಂತಿಸಲಸಾಧ್ಯವೂ ಪವಿತ್ರವೂ,ಮನೋಹರವೂ,ಮೂರು ಲೋಕದ ಜನರಿಗೂ ಆಶ್ಚರ್ಯವನ್ನುಂಟು ಮಾಡುವುದೂ ಆಗಿರುವ "ಸಮವಸರಣ" ವೆಂಬ

ಬಹಿರಂಗ ವಿಭೂತಿಯಿಂದಲೂ ಅನಂತಚತುಷ್ಟಯಗಳೆಂಬ ಅಂತರಂಗ ವಿಭೂತಿಗಳಿಂದಲೂ ಮೆರೆಯುತ್ತಾರೆ.

## ೧೮ ದೋಷಗಳು ಅರ್ಹತ್ಪರಮೇಷ್ಠಿಗಳಲ್ಲಿರುವುದಿಲ್ಲ.

**ತೃಷಾಜನ್ಮಜರಾಖೇದೈಃ ಕ್ಷುಧಾಶ್ಚರ್ಯಯುತೈಃ ಸದಾ ।**
**ರಾಗದೋಷಭಯೈಃ ಸ್ವೇದೈರ್ದುಃಖಶೋಕೈರ್ಭವಪ್ರದೈಃ ॥೩೭॥**
**ನಿದ್ರಾಚಿಂತಾಮದೈರ್ಮೋಹೈರ್ದೋಷೈರ್ದ್ವೇಷಸಮನ್ವಿತೈಃ ।**
**ಮುಕ್ತೋಽಸ್ತಿ ಮರಣೇನಾಪಿ ಯುಕ್ತೋಽನಂತಚತುಷ್ಟಯೈಃ॥೩೮॥**

ಅರ್ಥ—ಬಾಯಾರಿಕೆಯೂ, ಜನ್ಮತಾಳುವುದೂ, ಮುದಿತನವೂ, ಖೇದವೂ, ಹಸಿವೂ, ಆಶ್ಚರ್ಯವೂ, ಪ್ರೀತಿಯೂ, ರೋಗವೂ, ಹೆದರಿಕೆಯೂ, ಬೆವರೂ, ದುಃಖವೂ, ಸಂತಾಪವೂ, ನಿದ್ರೆಯೂ, ಚಿಂತೆಯೂ, ಗರ್ವವೂ, ಮಮತೆಯೂ, ಶತ್ರುತ್ವವೂ, ಮತ್ತು ಮರಣವೂ ಇವು ೧೮ ದೋಷಗಳು. ಇವುಗಳಿಂದ ಸಂಸಾರದಲ್ಲಿ ನಾನಾಬಗೆಯ ದುಃಖಗಳುಂಟಾಗುತ್ತವೆ. ಅರ್ಹತ್ಪರಮೇಶ್ವರರು ಇವುಗಳಿಂದ ಬಿಡಲ್ಪಟ್ಟವರಾಗಿಯೂ, ಮತ್ತು ಅನಂತಚತುಷ್ಟಯಗಳಿಂದ ಕೂಡಿದವರಾಗಿಯೂ ಇರುವರು.

**ಪೂರ್ವೋದ್ದಿಷ್ಟೈರ್ಗುಣೈರೇಭಿಃ ಶೋಭಿತಂ ಸುಸುಖಪ್ರದಂ ।**
**ಅರ್ಹಂತಂ ಭವನಾಶಾಯ ವಂದೇಽಹಂ ಭವನಾಶಕಂ ॥ ೩೯ ॥**

ಅರ್ಥ—ಜಿನೇಶ್ವರರಾದ ಶ್ರೀಅರ್ಹತ್ಪರಮೇಶ್ವರರು ಮೇಲೆ ಬರೆದ ೪೬ ಗುಣಗಳಿಂದ ಶೋಭಿತರಾಗಿಯೂ, ಸಂಸಾರವನ್ನು ನಾಶಮಾಡಿದವರಾಗಿಯೂ ಆಗಿರುವರು. ಅಂತಹ ಅರ್ಹತ್ಪರಮೇಶ್ವರರನ್ನು ನಾನು ನನ್ನ ಜನ್ಮ-ಮರಣರೂಪವಾದ ಸಂಸಾರದ ವಿನಾಶಕ್ಕಾಗಿ ನಮಸ್ಕರಿಸುವೆನು.

ಈ ರೀತಿ ಅರ್ಹತ್ಪರಮೇಶ್ವರರ ಗುಣವರ್ಣನೆಯು ಮುಗಿಯಿತು.

# ಸಿದ್ಧಪರಮೇಷ್ಠಿಗಳ ಗುಣವರ್ಣನೆ.

**ಯಥಾಶಕ್ತ್ಯೈವ ವರ್ಣ್ಯಂತೇ ಶ್ರೀಸಿದ್ಧಪರಮೇಷ್ಠಿನಾಂ ।**
**ಅಷ್ಟೌ ಗುಣಾಃ ಸದಾ ಚಿಂತ್ಯಾ ಅಧುನಾ ಸ್ವರ್ಗಮೋಕ್ಷದಾಃ ॥೬೦॥**

ಅರ್ಥ—ಶ್ರೀಸಿದ್ಧಪರಮೇಷ್ಠಿಗಳಲ್ಲಿ ಎಂಟು ಗುಣಗಳಿರುತ್ತವೆ. ಆ ಗುಣಗಳು ಯಾವಾಗಲೂ ಸ್ಮರಣೆ ಮಾಡಲು ಯೋಗ್ಯವಾದವುಗಳು, ಮತ್ತು ಅವುಗಳಿಂದ ಸ್ವರ್ಗ-ಮೋಕ್ಷಗಳು ಪ್ರಾಪ್ತವಾಗುವವು.ಆದುದರಿಂದ ನನ್ನ ಶಕ್ತ್ಯನುಸಾರ ಆ ಗುಣಗಳ ವರ್ಣನೆಯನ್ನು ಮಾಡುವೆನು.

**ಸಮ್ಯಕ್ತ್ವೇನ ಗುಣೇನೈವ ಸುಖಾಮೃತರಸೇನ ವೈ ।**
**ಸ್ಥಿರೇಣ ಸುಖಪುಂಜೇನ ಸಿದ್ಧಾ ಭಾಂತಿ ಸುಸಿದ್ಧಿದಾಃ ॥ ೬೧ ॥**

ಅರ್ಥ—ಮೋಕ್ಷಲಕ್ಷ್ಮಿಯೆಂಬ ಪರಮಸಿದ್ಧಿಯನ್ನು ಕೊಡುವವರಾದ ಸಿದ್ಧಪರಮೇಷ್ಠಿಗಳು ಸಮ್ಯಕ್ತ್ವಗುಣದಿಂದ ನಿರಂತರ ಕೂಡಿರುತ್ತಾರೆ. ಈ ಗುಣವು ಸುಖವೆಂಬ ಅಮೃತರಸದಿಂದ ತುಂಬಿತುಳುಕಾಡುತ್ತಿದೆ. ಯಾವಾಗಲೂ ಸ್ಥಿರವಾಗಿಯೂ, ಸುಖದರಾಶಿಯಾಗಿಯೂ ಇರುತ್ತದೆ. ಈ ಸಮ್ಯಕ್ತ್ವಗುಣವು ಸಿದ್ಧಪರಮೇಷ್ಠಿಗಳ ಮೊದಲನೆಯ ಗುಣವು.

**ಸರ್ವದ್ರವ್ಯಾಣಿ ಜಾನಂತಃ ಕೇವಲಜ್ಞಾನಲಬ್ಧಿತಃ ।**
**ಸಪರ್ಯಯಾಣಿ ಸಿದ್ಧಾ ಯೇ ತೇ ಭವಂತು ಸುಖಾಪ್ತಯೇ ॥೬೨॥**

ಅರ್ಥ—ಸಿದ್ಧಪರಮೇಷ್ಠಿಗಳಿಗೆ ಕೇವಲಜ್ಞಾನದ ಪ್ರಾಪ್ತಿಯಿಂದಾಗಿ ಭೂತಕಾಲದಲ್ಲಿ ಆಗಿರುವ ಮತ್ತು ಭಾವಿಕಾಲದಲ್ಲಿ ಆಗುವ, ವರ್ತಮಾನದಲ್ಲಿ ಆಗುತ್ತಿರುವ ಎಲ್ಲಾ ಪರ್ಯಾಯಗಳಿಂದ ಕೂಡಿದ ಎಲ್ಲಾ ದ್ರವ್ಯಗಳನ್ನು ತಿಳಿಯುತ್ತಾರೆ. ಇಂತಹ ಸಿದ್ಧರು ನನಗೆ ಸುಖವನ್ನು ಕೊಡುವವರಾಗಲಿ. ಅನಂತಜ್ಞಾನವೆಂಬುದು ಸಿದ್ಧರ ಎರಡನೇ ಗುಣವು.

**ಅನಂತಾನಂತವಸ್ತೂನಿ ಪಶ್ಯಂತಃ ಸ್ವಾತ್ಮಚಕ್ಷುಷಾ ।**
**ಶ್ರಮಂ ವಿನಾ ಹಿ ಶೋಭಂತೇ ಸಿದ್ಧಾ ನಿತ್ಯಸುಖಪ್ರದಾಃ ॥ ೬೩ ॥**

ಅರ್ಥ—ಮೋಕ್ಷರೂಪವಾದ ನಿತ್ಯಸುಖವನ್ನು ಕೊಡುವ ಸಿದ್ಧಪರಮೇಷ್ಠಿಗಳು ತನ್ನ ಶುದ್ಧವಾದ ಆತ್ಮಸ್ವರೂಪಗಳಾಗಿರುವ ಕಣ್ಣುಗಳಿಂದ, ಯಾವುದಾದರೊಂದು ಬಗೆಯ ಕಷ್ಟವಿಲ್ಲದೇನೇಯೇ ಅನಂತಾನಂತ

ಪದಾರ್ಥಗಳನ್ನು [ ವಸ್ತುಗಳನ್ನು ] ನಿರಂತರ ನೋಡುತ್ತಿರುವರು. ಇದು ಅನಂತದರ್ಶನವು. ಇದು ಸಿದ್ಧರ ಮೂರನೆಯ ಗುಣವು.

**ಗುಣೇನಾನಂತವೀರ್ಯೇಣ ತೇಜೋರಾಶಿಮಯೇನ ವೈ ।**
**ಆನಂದ ಸಹಿತಾಃ ಸಿದ್ಧಾಃ ಸಿದ್ಧಿಂ ದದ್ಯುಃ ಸ್ವಸೌಖ್ಯದಾಂ ॥೭೪॥**

ಅರ್ಥ—ಸಿದ್ಧಪರಮೇಷ್ಠಿಗಳು ತೇಜಃಪುಂಜದಂತಿರುವ ಅನಂತ ವೀರ್ಯವೆಂಬ ಗುಣದಿಂದ ಆನಂದಿತರಾಗಿರುವರು. ಇಂತಹ ಸಿದ್ಧರು ತನ್ನ ಆತ್ಮಜನ್ಯಸುಖವನ್ನು ಕೊಡುವ ಸಿದ್ಧಿಯನ್ನು ಕೊಡಲಿ ! ಅನಂತ ವೀರ್ಯವೆಂಬುದು ಸಿದ್ಧರ ನಾಲ್ಕನೇ ಗುಣವು.

**ನಾಮಕರ್ಮಕ್ಷಯಾತ್ಪ್ರಾಪ್ತಂ ಸೂಕ್ಷ್ಮತ್ವಂ ಸುಖಶಾಂತಿದಂ ।**
**ಸಿದ್ಧೈಃ ಸದಾ ಜಗದ್ವಂದ್ಯೈಃ ಸಂಸಾರಕ್ಲೇಶನಾಶಕೈಃ ॥ ೭೫ ॥**

ಅರ್ಥ—ಸಿದ್ಧಪರಮೇಷ್ಠಿಗಳು ಮೂರು ಲೋಕದ ಪ್ರಾಣಿಗಳಿಂದಲೂ ವಂದನೀಯರು. ಸಂಸಾರದ ಎಲ್ಲಾ ಕ್ಲೇಶಗಳನ್ನು ನಾಶ ಮಾಡುವವರು. ಇವರು ತನ್ನ ನಾಮಕರ್ಮದ ಅತ್ಯಂತ ಕ್ಷಯಮಾಡಿರುವುದರಿಂದ ಎಲ್ಲಾ ಪ್ರಕಾರದ ಸುಖವನ್ನೂ ಮತ್ತು ಶಾಂತಿಯನ್ನೂ ಕೊಡುವ ಸೂಕ್ಷ್ಮತ್ವವೆಂಬ ಗುಣವನ್ನು ಪಡೆದಿದ್ದಾರೆ. ಸೂಕ್ಷ್ಮತ್ವವೆಂಬುದು ಸಿದ್ಧರ ಐದನೆಯ ಗುಣವು.

**ತಥಾಯುಃಕರ್ಮಣೋ ನಾಶಾದವಗಾಹಗುಣೇನ ತು ।**
**ಲಬ್ಧೇನಾನಂದಪುಂಜೇನ ಸಿದ್ಧಾ ಭಾಂತಿ ಸುಶಾಂತಿದಾಃ ॥ ೭೬ ॥**

ಅರ್ಥ—ಉತ್ತಮ ಶಾಂತಿಯನ್ನು ಕೊಡತಕ್ಕ ಸಿದ್ಧಪರಮೇಷ್ಠಿಗಳಿಗೆ ಆಯುಃಕರ್ಮದ ನಾಶವಾಗಿರುವುದರಿಂದ ಅಂತ್ಯವಿಲ್ಲದ ಆನಂದ ಪುಂಜವಾದ ಅವಗಾಹನಗುಣವು ಪ್ರಾಪ್ತವಾಗಿದೆ. ಈ ಗುಣದಿಂದ ಅವರು ನಿರಂತರ ಕೂಡಿರುತ್ತಾರೆ. ಅವಗಾಹನವೆಂಬುದು ಸಿದ್ಧರ ಆರನೆಯ ಗುಣವು.

**ಸ್ವರ್ಗಮೋಕ್ಷಪ್ರದಾಃ ಸಿದ್ಧಾಸ್ತಥಾಗುರುಲಘುಸ್ಸ್ಪೃಶಃ ।**
**ಗೋತ್ರಕರ್ಮವಿನಾಶಾದ್ಧಿ ಭವಂತು ಭವಹಾನಯೇ ॥ ೭೭ ॥**

ಅರ್ಥ—ಸ್ವರ್ಗಮೋಕ್ಷವನ್ನು ಕೊಡುವ ಸಿದ್ಧಪರಮೇಷ್ಠಿಗಳ

ಗೋತ್ರಕರ್ಮದ ನಾಶದಿಂದ ಅಗುರುಲಘುತ್ವವೆಂಬ ಗುಣವುಂಟಾಗುತ್ತದೆ ಈ ಅಗುರುಲಘುವೆಂಬ ಗುಣವನ್ನು ಪಡೆದ ಸಿದ್ಧರು ನನ್ನ ಜನ್ಮ-ಮರಣ ರೂಪವಾದ ಸಂಸಾರವನ್ನು ನಾಶ ಮಾಡಲಿ ! ಅಗುರುಲಘುತ್ವವೆಂಬುದು ಸಿದ್ಧರ ಏಳನೆಯ ಗುಣವು.

**ಸಾತಾಸಾತಕ್ಷಯಾತ್ಸಿದ್ಧೈರವ್ಯಾಬಾಧಗುಣಃ ಪರಃ ।**
**ಪ್ರಾಪ್ತಃ ಸದಾ ಹಿ ಜಗತಃ ಶಾಂತಿದಃ ಸುಖದಾಯಕೈಃ ॥ ೭೮ ॥**

ಅರ್ಥ—ಸಂಸಾರದ ಎಲ್ಲಾ ಪ್ರಾಣಿಗಳಿಗೆ ಸುಖವನ್ನು ಕೊಡುವ ಆ ಸಿದ್ಧಪರಮೇಷ್ಠಿಗಳಿಗೆ ಸಾತಾವೇದನೀಯ ಮತ್ತು ಅಸಾತಾವೇದನೀಯ ಕರ್ಮಗಳ ಸಂಪೂರ್ಣಕ್ಷಯವಾಗಿರುವುದರಿಂದ ಸರ್ವೋತ್ಕೃಷ್ಟ ಮತ್ತು ಮೂರು ಲೋಕಗಳಿಗೆ ನಿರಂತರ ಶಾಂತಿದಾಯಕವಾದ ಅವ್ಯಾಬಾಧಗುಣವು ಉಂಟಾಗಿದೆ. ಇದು ಸಿದ್ಧರ ಎಂಟನೇಯ ಗುಣವು.

**ಇತ್ಯಷ್ಟಭಿರ್ಗುಣೈಸ್ತುಷ್ಟಾಃ ಸಿದ್ಧಾ ಲೋಕಾಗ್ರವಾಸಿನಃ ।**
**ಚಿದಾನಂದಮಯಾ ಲೋಕೇ ಶೋಭಂತೇ ಶಾಂತಿಸೌಖ್ಯದಾಃ ॥೭೯**

ಅರ್ಥ—ಈ ಪ್ರಕಾರ ಮೇಲೆ ಹೇಳಿದ ಎಂಟು ಗುಣಗಳಿಂದ ಆ ಸಿದ್ಧಪರಮೇಷ್ಠಿಗಳು ಸದಾ ಸಂತುಷ್ಟರಾಗಿಯೂ, ನಿಜಾತ್ಮನಲ್ಲಿ ಲೀನರಾಗಿಯೂ, ಲೋಕದ ಮೇಲ್ಭಾಗದಲ್ಲಿ ವಿರಾಜಮಾನರಾಗಿಯೂ, ಚೈತನ್ಯ ಸ್ವರೂಪರಾಗಿಯೂ, ಆನಂದಮಯರಾಗಿಯೂ, ಇರುವರು. ಸಂಪೂರ್ಣ ಸಂಸಾರಕ್ಕೆ ಸುಖ ಮತ್ತು ಶಾಂತಿಯನ್ನು ಕೊಡುವವರಾಗಿರುವರು. ಇವರು ನಿರಂತರ ಶೋಭಿಸುವರಾಗಿಯೂ ಇರುವರು.

**ಸಿದ್ಧಾಂಸ್ತ್ರೈಲೋಕ್ಯಮಹಿತಾನ್ ಲೋಕಾತೀತಸುಖಪ್ರದಾನ್ ।**
**ಭಕ್ತ್ಯಾ ಧ್ಯಾಯಾಮ್ಯಹಂ ಸ್ತೌಮಿ ತದ್ಗುಣಪ್ರಾಪ್ತಯೇ ಸದಾ॥೮೦**

ಅರ್ಥ—ಯಾವ ಸಿದ್ಧರು ಮೂರು ಲೋಕಗಳಿಂದ ಪೂಜ್ಯರು ಮತ್ತು ಅಲೌಕಿಕವಾದ ಮೋಕ್ಷರೂಪ ಸುಖವನ್ನು ಕೊಡುವವರು. ಇಂತಹ ಸಿದ್ಧಪರಮೇಷ್ಠಿಗಳನ್ನು ಅವರ ಗುಣಗಳನ್ನು ಹೊಂದುವುದಕ್ಕಾಗಿ ಯಾವಾಗಲೂ ಧ್ಯಾನಿಸುವೆನು. ಹಾಗೇನೇಯೇ ಭಕ್ತಿಪೂರ್ವಕವಾಗಿ ನಿರಂತರ ಸ್ತುತಿ ಮಾಡುವೆನು.

ಈ ರೀತಿ ಸಿದ್ಧರ ಗುಣವರ್ಣನೆಯು ಸಮಾಪ್ತವಾಯಿತು.

## ಆಚಾರ್ಯಪರಮೇಷ್ಠಿಗಳ ಗುಣವರ್ಣನೆ.

**ಭಕ್ತ್ಯಾ ಮಯಾ ಹಿ ಕಥ್ಯಂತೇ ಹ್ಯಾಚಾರ್ಯಪರಮೇಷ್ಠಿನಾಂ ।**
**ಗುಣಾಃ ಸ್ವರ್ಮೋಕ್ಷದಾಃ ಪೂತಾಃ ಷಟ್‌ತ್ರಿಂಶತ್ರಮಯಾನ್ವಿತಾಃ॥**

ಅರ್ಥ—ಶ್ರೀ ಆಚಾರ್ಯಪರಮೇಷ್ಠಿಗಳಿಗೆ ೩೬ ಮೂಲಗುಣಗಳು ಇವೆ. ಅವೆಲ್ಲವೂ ಪವಿತ್ರವೂ, ಸ್ವರ್ಗ ಮೋಕ್ಷ ಸಂಪತ್ತುಗಳನ್ನು ಕೊಡತಕ್ಕವೂ ಆಗಿವೆ. ಆದುದರಿಂದ ನಾನು ಈಗ ಭಕ್ತಿಯ ಮೂಲಕ ಆ ಗುಣಗಳನ್ನು ವರ್ಣಿಸುವೆನು.

೧೨ ಪ್ರಕಾರದ ಬಹಿರಂಗ ಮತ್ತು ಅಂತರಂಗ ತಪಗಳೂ, ೧೦ ಪ್ರಕಾರಗಳಾದ ಉತ್ತಮಕ್ಷಮಾದಿ ಧರ್ಮಗಳೂ, ೬ ಪ್ರಕಾರಗಳಾದ ಸಮತಾದಿ ಆವಶ್ಯಕ ಕ್ರಿಯೆಗಳೂ, ೫ ಪ್ರಕಾರಗಳಾದ ಅಹಿಂಸಾದಿ ಮಹಾವ್ರತಗಳೂ, ೩ ಪ್ರಕಾರಗಳಾದ ಮನೋಗುಪ್ತಿ ಆದಿ ಗುಪ್ತಿಗಳೂ, ಸೇರಿ ೩೬ ಆಚಾರ್ಯರ ಮೂಲಗುಣಗಳಾಗುತ್ತವೆ.

## ೧೨ ಪ್ರಕಾರದ ತಪಗಳು.

**ತಪೋ ಹ್ಯನಶನಂ ಧತ್ತೇ ತ್ಯಕ್ತ್ವಾಹಾರಂ ಚತುರ್ವಿಧಂ ।**
**ಚಿತ್ವಾಕ್ಷಾಣಿ ವಶಂ ನೀತ್ವಾ ಲೀನಃ ಸ್ವಾತ್ಮನಿ ನೌಮಿ ತಂ ॥೮೨॥**

ಅರ್ಥ—ಯಾವ ಆಚಾರ್ಯರು ಅನ್ನ, ಪಾನ, ಖಾದ್ಯ ಮತ್ತು ಲೇಹ್ಯಗಳೆಂಬ ನಾಲ್ಕು ಬಗೆಯ ಆಹಾರಗಳನ್ನು ಬಿಟ್ಟು ಅನಶನ ಅಂದರೆ ಉಪವಾಸವನ್ನು ಧಾರಣೆ ಮಾಡುತ್ತಾರೆಯೋ, ಹಾಗೇನೇಯೇ ಪಂಚೇಂದ್ರಿಯುಗಳನ್ನು ತನ್ನ ವಶಮಾಡಿಕೊಂಡು ಯಾವಾಗಲೂ ತನ್ನಾತ್ಮನಲ್ಲಿ ತಲ್ಲೀನರಾಗಿರುತ್ತಾರೋ, ಅಂತಹ ಆಚಾರ್ಯಪರಮೇಷ್ಠಿಗಳಿಗೆ ನಾನು ನಮಸ್ಕರಿಸುತ್ತೇನೆ. ಇದು ಉಪವಾಸವೆಂಬ ತಪವು ಆಚಾರ್ಯರ ಮೊದಲನೆಯ ಮೂಲಗುಣವು.

**ಸ್ವಾಧ್ಯಾಯಧ್ಯಾನಹೇತೋರ್ಹ್ಯವಮೋದರ್ಯಂ ತಪೋ ವರಂ ।**
**ಧೃತ್ವಾ ಯೋ ಯತತೇ ಪಾತುಂ ಸ್ವರಸಂ ನೌಮಿ ತಂ ಮುದಾ ॥೩॥**

ಅರ್ಥ—ಯಾವ ಆಚಾರ್ಯರು ಸ್ವಾಧ್ಯಾಯ ಮತ್ತು ಧ್ಯಾನದಲ್ಲಿ ತತ್ಪರರಾಗಿರಲು ಉತ್ತಮವಾದ “ ಅವಮೋದರ್ಯ ” ವೆಂಬ ತಪಸ್ಸನ್ನು ಅಂಗೀಕರಿಸುತ್ತಾರೆಯೋ, ಹಾಗೇನೇಯೋ ನಿಜಾತ್ಮನಿಂದುಂಟಾಗುವ ಪರಮಾನಂದರಸವನ್ನು ರಕ್ಷಿಸಲು ಸತತವೂ ಪ್ರಯತ್ನಿಸುತ್ತಿರುವರೋ ಅಂತಹ ಆಚಾರ್ಯರಿಗೆ ನಾನು ಆನಂದಪೂರ್ವಕವಾಗಿ ನಮಸ್ಕರಿಸುವೆನು. ಇದು “ ಊನೋದರ ” [ ಹಸಿವಿನಿಂದ ಕಮ್ಮಿ ಊಟ ಮಾಡುವಿಕೆ ] ವೆಂಬ ಎರಡನೆಯ ತಪವು. ಇದು ಆಚಾರ್ಯರ ೨ ನೇ ಮೂಲ ಗುಣವಾಗಿದೆ.

**ಇಚ್ಛಾವಿನಾಶಹೇತೋರ್ಯಃ ಪರೀಕ್ಷಾರ್ಥಂ ಹಿ ಕರ್ಮಣಃ ।**
**ವೃತ್ತಿಸಂಖ್ಯಾತಪೋ ಧತ್ತೇ ಚರ್ಯಾರ್ಥಂ ನೌಮಿ ತಂ ಮುದಾ ॥**

ಅರ್ಥ—ಯಾವ ಆಚಾರ್ಯಪರಮೇಷ್ಠಿಗಳು ತನ್ನ ಇಚ್ಛೆಯನ್ನು ನಾಶಮಾಡುವುದಕ್ಕೋಸ್ಕರವಾಗಿಯೂ ಮತ್ತು ತನ್ನ ಕರ್ಮಗಳ ಉದಯವನ್ನು ಪರೀಕ್ಷಿಸುವುದಕ್ಕಾಗಿಯೂ, ಚರ್ಯೆಗೆ ಹೋಗುವಾಗ ಇಂತಹ ಸ್ಥಾನದಲ್ಲಿ ಆಹಾರ ಸಿಕ್ಕಿದರೆ ತೆಗೆದುಕೊಳ್ಳುವೆವು ಇಲ್ಲದಿದ್ದರೆ ಆಹಾರ ತೆಗೆದುಕೊಳ್ಳುವುದಿಲ್ಲ ಎಂಬ ವೃತ್ತಿಪರಿಸಂಖ್ಯಾನತಪಶ್ಚರ್ಯೆಯನ್ನು ಮಾಡುತ್ತಾರೆ. ಅಂತಹ ಆಚಾರ್ಯರಿಗೆ ನಾನು ಪ್ರಸನ್ನನಾಗಿ ನಮಸ್ಕರಿಸುವೆನು.

**ಬಾಹ್ಯೈ ರಸೈರಯಂ ಚಾತ್ಮಾ ನೈವ ತುಷ್ಯತಿ ಪುಷ್ಯತಿ ।**
**ವಿಹಾಯ ಷಡ್ರಸಾನ್ ತುಷ್ಟಃ ಸ್ವರಸೇ ನೌಮಿ ತಂ ಸದಾ ॥ [illegible] ॥**

ಅರ್ಥ—ಈ ಜೀವನು ಹುಳಿ, ಸಿಹಿ, ಕಹಿ ಮೊದಲಾದ ಆರು ರಸಗಳಿಂದ ಎಂದೂ ಸಂತುಷ್ಟನಾಗಲಾರನು. ಮತ್ತು ಹೃಷ್ಟಪುಷ್ಟನಾಗಲಾರನು. ಇದನ್ನೇ ವಿಚಾರಿಸಿ ಆಚಾರ್ಯರು ಷಡ್ರಸಗಳನ್ನು ಬಿಟ್ಟು ತನ್ನ ನಿಜಾತ್ಮಾನಂದರಸದಲ್ಲಿ ಸಂತುಷ್ಟರಾಗಿರುತ್ತಾರೆ. ಅಂತಹ ಆಚಾರ್ಯರಿಗೆ ನಾನು ನಿರಂತರ ನಮಸ್ಕಾರಮಾಡುತ್ತೇನೆ.

**ಚಿತ್ತವೇಗನಿರೋಧಾರ್ಥಂ ಸ್ಥಾನೇ ನಿರ್ಜಂತುಕೇ ವಸನ್ ।**
**ವಿಕಾಂತೇ ಯತತೇ ಸ್ಥಾತುಂ ಸ್ವಪದೇ ಯೋಽಪಿ ನೌಮಿ ತಂ ॥೮೬॥**

ಅರ್ಥ— ಯಾವ ಆಚಾರ್ಯರು ತನ್ನ ಮನಸ್ಸಿನ ವೇಗವನ್ನು ತಡೆಯಲು ಜೀವಜಂತುಗಳಿಂದ ರಹಿತವಾದ ಏಕಾಂತಸ್ಥಾನದಲ್ಲಿ ನಿವಾಸಮಾಡುತ್ತಾ ತನ್ನ ನಿಜಾತ್ಮನಲ್ಲಿ ಲೀನವಾಗಲು ಪ್ರಯತ್ನಿಸಿರುತ್ತಾರೆಯೋ ಅಂತಹ ಆಚಾರ್ಯರಿಗೆ ನಾನು ನಮಸ್ಕಾರಮಾಡುತ್ತೇನೆ.

**ಶೀತೇ ಕರ್ಮವಿನಾಶಾರ್ಥಂ ನದ್ಯಾಸ್ತೀರೇ ತರೋಸ್ತಲೇ ||**
**ವರ್ಷಾಕಾಲೇ ತು ಗ್ರೀಷ್ಮೇ ಹಿ ಗಿರೌ ಸಂತಿಷ್ಠತೇ ಯತಿಃ || ೭೭ ||**

ಅರ್ಥ—ಶ್ರೀ ಆಚಾರ್ಯರು ತನ್ನ ದುಷ್ಟಕರ್ಮಗಳ ನಾಶಕ್ಕಾಗಿ ಚಳಿಗಾಲದಲ್ಲಿ ನದೀದಂಡೆಯ ಮೇಲೆ ಧ್ಯಾನಮಾಡುತ್ತಾರೆ. ಮಳೆಗಾಲದಲ್ಲಿ ಮರದ ಕೆಳಗೆ ತಪಸ್ಸನ್ನು ಮಾಡುತ್ತಾರೆ. ಬೇಸಿಗೆಯ ಕಾಲದಲ್ಲಿ ಪರ್ವತದ ತುದಿಯಲ್ಲಿ ತಪಶ್ಚರ್ಯೆಯನ್ನು ಮಾಡುತ್ತಾರೆ. ಇದು ಕಾಯಕ್ಲೇಶವೆಂಬ ಆರನೇ ಬಾಹ್ಯತಪವಾಗಿದೆ.

## ಅಂತರಂಗತಪಸ್ಸುಗಳು.

**ಏವಂ ಷಡ್ಭೇದಕಂ ಬಾಹ್ಯಂ ತಪಃ ಪ್ರೋಕ್ತಂ ಸುದುರ್ಧರಂ |**
**ಅಧುನಾ ಪ್ರೋಚ್ಯತೇ ನೂನಮಂತರಂಗಂ ಹಿ ಷಡ್ವಿಧಂ || ೭೮ ||**

ಅರ್ಥ—ಈ ರೀತಿಯಾಗಿ ಮೇಲೆ ಬರೆದವುಗಳಾಗಿಯೂ ಅತಿ ಕಠಿಣವಾಗಿಯೂ ಇರುವ ಆರು ಬಾಹ್ಯತಪಗಳು ಹೇಳಲ್ಪಟ್ಟವು. ಈಗ ಮುಂದೆ ಆರು ಅಂತರಂಗ ತಪಗಳು ಹೇಳಲ್ಪಡುವವು.

**ಗುರವೇ ಕೃತದೋಷಂ ಯೋ ನಿವೇದಯತಿ ಶುದ್ಧಧೀಃ |**
**ನ ಕರೋತಿ ಪುನರ್ದೋಷಂ ತೃಪ್ತಃ ಸ್ವಾತ್ಮನಿ ನೌಮಿ ತಂ || ೭೯ ||**

ಅರ್ಥ—ಯಾವ ಆಚಾರ್ಯರು ನಿರ್ಮಲ ಬುದ್ಧಿಯನ್ನು ಧರಿಸುವವರಾಗಿ ತನ್ನಿಂದಾದ ದೋಷಗಳನ್ನು ಮರೆಮಾಚದೆ ತನ್ನ ದೀಕ್ಷಾಗುರುಗಳಿಗೆ ಹೇಳುತ್ತಾರೆಯೋ ಮರಳಿ ದೋಷಗಳನ್ನು ಮಾಡುವುದಿಲ್ಲವೋ ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುವೆನು. ಇದು ಪ್ರಾಯಶ್ಚಿತ್ತವೆಂಬ ತಪವು.

**ಸಮ್ಯಗ್ದೃಗ್ಬೋಧಚಾರಿತ್ರೈರ್ಭೂಷಿತಾನಾಂ ಹಿ ಯೋಗಿನಾಂ ।**
**ಕುರುತೇ ವಿನಯಂ ಭಕ್ತ್ಯಾ ತೃಪ್ತಃ ಸ್ವಾತ್ಮನಿ ನೌಮಿ ತಂ ॥ ೯೦ ॥**

ಅರ್ಥ—ಯಾವ ಆಚಾರ್ಯರು ಸಮ್ಯಗ್ದರ್ಶನಜ್ಞಾನಚಾರಿತ್ರಗಳಿಂದ ವಿಭೂಷಿತರಾದ ಮುನೀಶ್ವರರ ಭಕ್ತಿಪೂರ್ವಕವಾದ ವಿನಯವನ್ನು ಮಾಡುತ್ತಿರುತ್ತಾರೆಯೋ ಮತ್ತು ತನ್ನ ನಿಜಾತ್ಮನಲ್ಲಿ ನಿರಂತರ ತಲ್ಲೀನರಾಗಿರುತ್ತಾರೆಯೋ ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುವೆನು. ಇದು ವಿನಯವೆಂಬ ತಪವು.

**ತ್ಯಕ್ತ್ವಾ ಮಾನಂ ಪ್ರಮಾದಂ ಯೋ ಬಾಲವೃದ್ಧಾದಿಯೋಗಿನಾಂ ।**
**ವೈಯಾವೃತ್ಯಂ ಸದಾ ಕುರ್ವನ್ ಸ್ವಪದೇ ಸ್ತೌಮಿ ತಂ ಸ್ಥಿರಂ ॥**

ಅರ್ಥ—ಯಾವ ಆಚಾರ್ಯರು ತನ್ನ ಮಾನ ಮತ್ತು ಪ್ರಮಾದಗಳನ್ನು ಬಿಟ್ಟು ಬಾಲಮುನಿ ಮತ್ತು ವೃದ್ಧಮುನಿಗಳ ವೈಯಾವೃತ್ಯವನ್ನು (ಸೇವೆಯನ್ನು) ಮಾಡುತ್ತಿರುತ್ತಾರೆಯೋ ಹಾಗೇನೇಯೇ ತನ್ನಾತ್ಮನಲ್ಲಿ ಸ್ಥಿರವಾಗಿರುತ್ತಾರೆಯೋ ಅಂತಹ ಆಚಾರ್ಯರ ಸ್ತುತಿಯನ್ನು ನಾನು ಮಾಡುತ್ತೇನೆ. ಇದು ವೈಯಾವೃತ್ಯವೆಂಬ ತಪವು.

**ಯೇನ ಜ್ಞಾನಾದಿವೃದ್ಧ್ಯರ್ಥಂ ಪಠ್ಯತೇ ಪಾಠ್ಯತೇ ಶ್ರುತಂ ।**
**ಸ್ವಸ್ವಾದಂ ಸ್ವಾದಯನ್ ಧೀರಃ ಸ್ವಾಧ್ಯಾಯತಪಸಾ ಯುತಃ ॥೯೨॥**

ಅರ್ಥ—ಆಚಾರ್ಯರು ತನ್ನ ಜ್ಞಾನ ಮತ್ತು ವೈರಾಗ್ಯವನ್ನು ಹೆಚ್ಚಿಸಲು ಅನೇಕ ಪ್ರಕಾರಗಳಾದ ಧರ್ಮಶಾಸ್ತ್ರಗಳನ್ನು ಓದುತ್ತಾರೆ ಮತ್ತು ಓದಿಸುತ್ತಾರೆ. ಹಾಗೇನೇಯೇ ಅವರು ಧೀರವೀರರಾಗಿ ತನ್ನ ಆತ್ಮಜನ್ಯ ರಸದ ರುಚಿಯನ್ನನುಭವಮಾಡುತ್ತಾರೆ. ಈ ರೀತಿಯಾಗಿ ಅವರು ಸ್ವಾಧ್ಯಾಯವೆಂಬ ತಪಸ್ಸಿನಿಂದ ಕೂಡಿರುತ್ತಾರೆ. ಇದು ಸ್ವಾಧ್ಯಾಯವೆಂಬ ತಪವು.

**ಬಾಹ್ಯಾಂತರ್ಭೇದತಃ ಸಂಗಂ ತಾಪದಂ ದ್ವಿವಿಧಂ ಹಿ ಯಃ ।**
**ತ್ಯಕ್ತ್ವಾ ಪುನಃ ಶರೀರಾದ್ಧಿ ನಿರ್ಮೋಹೋऽಭೂತ್ಸ್ವಸಿದ್ಧಯೇ ॥೯೩**

ಅರ್ಥ—ಶ್ರೀ ಆಚಾರ್ಯರು ಬಹಿರಂಗ ಮತ್ತು ಅಂತರಂಗಭೇದ ರೂಪಗಳಾಗಿರುವ ಮತ್ತು ದುಃಖವನ್ನು ಕೊಡುವ ಪರಿಗ್ರಹಗಳನ್ನು

ಬಿಟ್ಟಿರುತ್ತಾರೆ. ಮತ್ತು ಆತ್ಮನ ವಿಶುದ್ಧತೆಯನ್ನು ಪ್ರಕಟಿಸಲು ಶರೀರದಿಂದ ಲೂ ಮಮತ್ವಬುದ್ಧಿಯನ್ನು ತೊರೆದವರಾಗಿರುತ್ತಾರೆ. ಇದು ವ್ಯುತ್ಸರ್ಗ ತಪವು.

**ತ್ಯಕ್ತ್ವಾರ್ತರೌದ್ರದುರ್ಧ್ಯಾನಂ ಧರ್ಮಂ ಶುಕ್ಲಂ ಕರೋತಿ ಯಃ ।**
**ಆತ್ಮನಾತ್ಮನಿ ಚಾತ್ಮಾನಂ ಧ್ಯಾಯತೇ ನೌಮಿ ತಂ ಮುದಾ ॥ ೯೪ ॥**

ಅರ್ಥ—ಯಾವ ಆಚಾರ್ಯರು ಆರ್ತಧ್ಯಾನ ಮತ್ತು ರೌದ್ರಧ್ಯಾನಗಳೆಂಬ ಎರಡು ಕೆಟ್ಟ ಧ್ಯಾನಗಳನ್ನು ಬಿಟ್ಟು ಧರ್ಮಧ್ಯಾನ ಮತ್ತು ಶುಕ್ಲಧ್ಯಾನಗಳೆಂಬ ಎರಡು ಶುಭಧ್ಯಾನಗಳನ್ನು ಧಾರಣೆ ಮಾಡುತ್ತಾರೋ ಹಾಗೇನೇಯೇ ತನ್ನ ಆತ್ಮನಲ್ಲಿ ತನ್ನ ಆತ್ಮನ ಮೂಲಕ ತನ್ನ ಆತ್ಮನನ್ನೇ ಧ್ಯಾನ ಮಾಡುತ್ತಾರೋ ಅಂತಹ ಆಚಾರ್ಯರಿಗೆ ನಾನು ಸಂತೋಷದಿಂದ ನಮಸ್ಕರಿಸುವೆನು. ಇದು ಧ್ಯಾನವೆಂಬ ತಪವು. ಹೀಗೆ ಆರು ಅಂತರಂಗ ತಪಗಳು.

**ಸ್ವರ್ಮೋಕ್ಷದಂ ಕ್ಲೇಶಹರಂ ಸುಖದಂ ಶಾಂತಿದಂ ತಥಾ ।**
**ತಪೋ ದ್ವಾದಶಧಾ ಪ್ರೋಕ್ತಂ ಸ್ವಸುಖಪ್ರಾಪಕಂ ಮಯಾ ॥೯೫॥**

ಅರ್ಥ—ಈ ಪ್ರಕಾರ ನನ್ನಿಂದ ಹನ್ನೆರಡು ಪ್ರಕಾರಗಳಾದ ತಪಗಳ ಸ್ವರೂಪವು ಹೇಳಲ್ಪಟ್ಟಿತು. ಇವು ಸ್ವರ್ಗಮೋಕ್ಷಗಳ ಸುಖ-ಸಂಪತ್ತುಗಳನ್ನು ಕೊಡುವಂತವುಗಳಾಗಿಯೂ, ಎಲ್ಲಾ ಸಂಕ್ಲೇಶಗಳನ್ನು ಹೋಗಲಾಡಿಸುವಂತವುಗಳಾಗಿಯೂ, ಸುಖ-ಶಾಂತಿಗಳನ್ನು ಕೊಡುವಂತವುಗಳಾಗಿಯೂ ಮತ್ತು ತನ್ನ ಆತ್ಮೀಯ ಸುಖವನ್ನು ಉಂಟು ಮಾಡಿಸುವಂತವುಗಳಾಗಿಯೂ ಆಗಿವೆ.

## ದಶಧರ್ಮಗಳ ಲಕ್ಷಣ.

**ಸ್ವಪದದ್ಯೋತಕಾ ಧರ್ಮಾ ದಶಾಪತ್ತಿವಿನಾಶಕಾಃ ।**
**ವರ್ಣ್ಯಂತೇ ಹಿ ಕ್ಷಮಾದ್ಯಾಸ್ತು ಶಾಂತಿಸೌಖ್ಯಪ್ರದಾ ನೃಣಾಂ॥೯೬॥**

ಅರ್ಥ—ಈಗ ನಾನು ಉತ್ತಮ ಕ್ಷಮಾದಿ ದಶಧರ್ಮಗಳ ಸ್ವರೂಪವನ್ನು ವರ್ಣಿಸುವೆನು. ಈ ಧರ್ಮಗಳು ಆತ್ಮನ ಶುದ್ಧಸ್ವರೂಪವನ್ನು

ಪ್ರಕಟಿಸುವಂತವುಗಳಾಗಿಯೂ, ಎಲ್ಲಾ ಬಗೆಯ ಆಪತ್ತಿಗಳನ್ನು ನಾಶ ಮಾಡುವಂತವುಗಳಾಗಿಯೂ, ಮತ್ತು ಮನುಷ್ಯನಿಗೆ ನಿರಂತರ ಸುಖಶಾಂತಿಗಳನ್ನು ಕೊಡುವಂತವುಗಳಾಗಿಯೂ ಆಗಿರುವವು.

**ಕ್ರೋಧತ್ಯಾಗಾತ್ ಕ್ಷಮಾಧರ್ಮೋ ಜಾಯತೇ ಮೋಕ್ಷದೋ-ನೃಣಾಂ ।**
**ಜ್ಞಾತ್ವೇತಿ ಕ್ರೋಧಮುಜ್ಝಿತ್ವಾ ಸ್ವಧರ್ಮಸ್ಥಂ ಸ್ತುವೀಮಿ ತಂ ॥೯೭**

ಅರ್ಥ—ಕ್ರೋಧಕಷಾಯವನ್ನು ಬಿಡುವುದರಿಂದ ಮನುಷ್ಯರಿಗೆ ಮೋಕ್ಷವನ್ನೀಯುವ ಉತ್ತಮಕ್ಷಮೆಯೆಂಬ ಗುಣವುಂಟಾಗುತ್ತದೆ. ಇದನ್ನೇ ತಿಳಿದು ಆಚಾರ್ಯರು ಕೋಪವನ್ನು ತೊರೆದು ತನ್ನ ನಿಜರೂಪವಾದ ಕ್ಷಮೆಯೆಂಬ ಆತ್ಮಸ್ವರೂಪದಲ್ಲಿ ತಲ್ಲೀನರಾಗುತ್ತಾರೆ. ಅವರನ್ನು ನಾನು ಸ್ತುತಿಸುತ್ತೇನೆ. ಇದು ಉತ್ತಮಕ್ಷಮೆಯೆಂಬ ಧರ್ಮವು.

**ಭವೇನ್ಮಾರ್ದವಧರ್ಮೋ ಹಿ ಮಾನತ್ಯಾಗಾತ್ಸುಖಪ್ರದಃ ।**
**ಜ್ಞಾತ್ವಾ ತ್ಯಕ್ತ್ವೇತಿ ಮಾನಂ ಯೋ ತಿಷ್ಠತ್ಯಾತ್ಮನಿ ನೌಮಿ ತಂ ॥೯೮**

ಅರ್ಥ—ಮಾನಕಷಾಯವನ್ನು ಬಿಡುವುದರಿಂದ ಎಲ್ಲಾ ಜೀವರುಗಳಿಗೆ ಸುಖವನ್ನುಂಟುಮಾಡುವ ಮಾರ್ದವ ಧರ್ಮವು ಪ್ರಕಟವಾಗುತ್ತದೆ. ಇದನ್ನು ತಿಳಿದು ಆಚಾರ್ಯರು ಮಾನಕಷಾಯವನ್ನು ಬಿಟ್ಟು ತನ್ನ ಆತ್ಮಾನಂದರಸದಲ್ಲಿ ಮಗ್ನರಾಗಿರುತ್ತಾರೆ. ಅವರಿಗೆ ನಾನು ಸಮಸ್ಕರಿಸುತ್ತೇನೆ. ಇದು ಉತ್ತಮಮಾರ್ದವವೆಂಬ ಧರ್ಮವು.

**ಭವೇದಾರ್ಜವಧರ್ಮೋ ಹಿ ಮಾಯಾತ್ಯಾಗಾನ್ಮನೋಹರಃ ।**
**ಇತ್ಥಂ ಮಾಯಾಗ್ರಹಂ ಮುಕ್ತ್ವಾ ತುಷ್ಟಃ ಸ್ವಾತ್ಮನಿ ನೌಮಿ ತಂ॥**

ಅರ್ಥ—ಕಪಟಾಚಾರವನ್ನು ತೊರೆಯುವುದರಿಂದ ಮನೋಹರವಾದ ಆರ್ಜವಧರ್ಮವು ಪ್ರಕಟವಾಗುತ್ತದೆ. ಇದನ್ನೇ ತಿಳಿದು ಆಚಾರ್ಯರು ಮಾಯಾಕಷಾಯವೆಂಬ ಪಿಶಾಚವನ್ನು ಬಿಟ್ಟು ನಿಜಾತ್ಮಾನುಭವದಲ್ಲಿ ತುಷ್ಟರಾಗಿರುತ್ತಾರೆ. ಅವರಿಗೆ ನಾನು ಸಮಸ್ಕರಿಸುವೆನು. ಇದು ಉತ್ತಮಾರ್ಜವವೆಂಬ ಧರ್ಮವು.

**ಸತ್ಯಧರ್ಮೋ ಭವೇನ್ನೂನಮನೃತಸ್ಯ ವಿವರ್ಜನಾತ್ ।**
**ಬುಧ್ವಾ ತ್ಯಕ್ತ್ವೇತಿ ಯೋಽಸತ್ಯಂ ಸ್ವಧರ್ಮೇ ನೌಮಿ ತಿಷ್ಠತಿ ॥೧೦೦॥**

ಅರ್ಥ—ಅನೃತಭಾಷಣ ಅಂದರೆ ಸುಳ್ಳು ಹೇಳುವುದನ್ನು ಬಿಡುವುದರಿಂದ ನಿಜವಾಗಿಯೂ ಸತ್ಯಧರ್ಮವು ಗೋಚರವಾಗುತ್ತದೆ. ಇದನ್ನೇ ತಿಳಿದು ಆಚಾರ್ಯರು ಅಸತ್ಯಭಾಷಣವನ್ನು ಬಿಟ್ಟು ಸತ್ಯವೆಂಬ ಆತ್ಮನ ನಿಜಗುಣದಲ್ಲಿ ಯಾವಾಗಲೂ ತಲ್ಲೀನರಾಗಿರುತ್ತಾರೆ. ಅವರಿಗೆ ನಾನು ನಮಸ್ಕರಿಸುವೆನು. ಇದು ಉತ್ತಮಸತ್ಯಧರ್ಮವು.

**ಶೌಚಧರ್ಮೋ ಭವೇನ್ನೂನಂ ಲೋಭತ್ಯಾಗಾತ್ಸುಖಾವಹಃ ।**
**ಲೋಭಂ ತ್ಯಕ್ತ್ವೇತಿ ಸ್ವಾತ್ಮಾನಂ ಧ್ಯಾಯತೇ ಯೋ ಹಿ ನೌಮಿ ತಂ**

ಅರ್ಥ—ಲೋಭಕಷಾಯವನ್ನು ತ್ಯಾಗ ಮಾಡುವುದರಿಂದ ಎಲ್ಲಾ ಜೀವಗಳಿಗೂ ಸುಖವನ್ನುಂಟು ಮಾಡುವ ಶೌಚಧರ್ಮವು ಪ್ರಕಟವಾಗುತ್ತದೆ. ಯಾರು ಲೋಭಭಾವವನ್ನು ಬಿಟ್ಟು ತನ್ನ ಶುದ್ಧಾತ್ಮನನ್ನು ಧ್ಯಾನ ಮಾಡುತ್ತಾರೋ ಅಂತಹ ಆಚಾರ್ಯರನ್ನು ನಾನು ನಮಸ್ಕರಿಸುವೆನು. ಇದು ಉತ್ತಮ ಶೌಚವೆಂಬ ಧರ್ಮವು.

**ಭವೇದಕ್ಷನಿರೋಧಾದ್ಧಿ ಸಂಯಮಃ ಕ್ಲೇಶನಾಶಕಃ ॥**
**ತ್ಯಕ್ತ್ವೇತ್ಯಕ್ಷಸುಖಂ ತೃಪ್ತಃ ಸ್ವಸುಖೇ ಯೋ ಹಿ ನೌಮಿ ತಂ ॥**

ಅರ್ಥ—ಪಂಚೇಂದ್ರಿಯಗಳ ವಿಷಯಗಳನ್ನು ನಿರೋಧ ಮಾಡುವುದರಿಂದಲೂ ಅಥವಾ ಅವುಗಳನ್ನು ವಶಮಾಡಿಕೊಳ್ಳುವುದರಿಂದಲೂ ಕ್ಲೇಶವನ್ನು ನಾಶಗೊಳಿಸುವ ಸಂಯಮವುಂಟಾಗುತ್ತದೆ. ಇದನ್ನೇ ತಿಳಿದು ಆಚಾರ್ಯರು ಇಂದ್ರಿಯಸುಖಗಳನ್ನು ಬಿಟ್ಟು ತನ್ನ ನಿಜಾತ್ಮನಿಂದುಂಟಾದ ಸುಖದಲ್ಲಿ ಲೀನರಾಗಿರುತ್ತಾರೆ. ಆದುದರಿಂದ ಆಚಾರ್ಯರಿಗೆ ನಮಸ್ಕಾರವು. ಇದು ಉತ್ತಮಸಂಯಮ ಧರ್ಮವು.

ಇಚ್ಛಾರೋಧಾತ್ತಪೋಧರ್ಮಃ ಶ್ರೇಯಾನಿತಿ ವಿಚಾರಯನ್ ।
ಇಚ್ಛಾರೋಧಂ ಹಿ ಯಃ ಕುರ್ವನ್ನಾಸ್ತೇ ಸಾತ್ಮನಿ ನೌಮಿ ತಂ ೧೦೩

ಅರ್ಥ—ಎಲ್ಲಾ ಬಗೆಯ ಇಚ್ಛೆಗಳನ್ನು ನಿರೋಧಮಾಡುವುದರಿಂದ ತಪವೆಂಬ ಧರ್ಮವು ಪ್ರಕಟವಾಗುತ್ತದೆ. ಆಚಾರ್ಯರು ಈ ತಪ

ಧರ್ಮವನ್ನು ಸರ್ವೋತ್ತಮವೆಂದು ತಿಳಿಯುತ್ತಾರೆ. ಆದುದರಿಂದ ಇಚ್ಛೆ ಗಳನ್ನು ನಿರೋಧ ಮಾಡಿ ನಿಜಾತ್ಮನ ಅನುಭವದಲ್ಲಿ ನಿರಂತರ ಮಗ್ನರಾ ಗಿರುತ್ತಾರೆ. ಅವರನ್ನು ನಾನು ನಮಸ್ಕರಿಸುವೆನು. ಇದು ಉತ್ತಮತಪ ವೆಂಬ ಧರ್ಮವು.

**ತ್ಯಾಗಧರ್ಮೋ ಭವೇದನ್ಯಭಾವಾನಾಂ ವರ್ಜನಾದಿತಿ ।**
**ಪರಭಾವಂ ತ್ಯಜನ್ ಕುರ್ವನ್ ದಾನಂ ಸ್ವಂ ವೇತ್ತಿ ನೌಮಿ ತಂ ॥**

ಅರ್ಥ—ತನ್ನ ಶುದ್ಧಾತ್ಮನಿಂದ ಬೇರೆಯಾದ ಪರಭಾವಗಳನ್ನು ಸರ್ವಥಾ ಬಿಡುವುದರಿಂದ ತ್ಯಾಗಧರ್ಮವು ಉಂಟಾಗುತ್ತದೆ. ಪರಭಾವ ವನ್ನು ತ್ಯಾಗಮಾಡಿ ನಿಜಾತ್ಮಸ್ವಭಾವವನ್ನು ಚೆನ್ನಾಗಿ ಅರಿಯುತ್ತಾರೆ. ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುವೆನು. ಇದು ಉತ್ತಮ ತ್ಯಾಗಧರ್ಮವು.

**ಬಾಹ್ಯಾಭ್ಯಂತರಸಂಗೌ ಹಿ ತ್ಯಕ್ತ್ವಾ ಸ್ವಾತ್ಮನಿ ತಿಷ್ಟತಿ ॥**
**ಭೇದವಿಜ್ಞಾನಶಸ್ತ್ರಂ ಯಃ ಕರೇ ಧೃತ್ವಾ ಸ್ತವೀಮಿ ತಂ ॥೧೦೫॥**

ಅರ್ಥ—ಯಾವ ಆಚಾರ್ಯರು ಭೇದವಿಜ್ಞಾನವೆಂಬ ಶಸ್ತ್ರವನ್ನು ಕೈಯಲ್ಲಿ ಹಿಡಿದು ಬಹಿರಂಗ ಮತ್ತು ಅಂತರಂಗರೂಪಗಳಾದ ಎಲ್ಲಾ ಪರಿಗ್ರಹಗಳನ್ನು ತ್ಯಾಗ ಮಾಡುತ್ತಾರೆ. ಅದರಿಂದವರು ಸ್ವಾತ್ಮಾನುಭವ ರಸವನ್ನು ಭೋಗಿಸುತ್ತಾರೆ. ಅವರನ್ನು ನಾನು ಸ್ತೋತ್ರ ಮಾಡುತ್ತೇನೆ. ಇದು ಉತ್ತಮ ಆಕಿಂಚಿನ್ಯವೆಂಬ ಧರ್ಮವು.

**ಸರ್ವಾಃ ಸ್ತ್ರಿಯಃ ಪರಿತಜ್ಯ ಮುಕ್ತಿಸ್ತ್ರೀಸಂಗಮಾಯ ಯಃ ।**
**ಚಿನ್ಮಯೇ ಸ್ವಾತ್ಮನಿ ಸ್ಥಾತುಂ ಯತತೇ ಸ್ತೌಮಿ ತಂ ಸದಾ ॥೧೦೬॥**

ಅರ್ಥ—ಯಾವ ಆಚಾರ್ಯಪರಮೇಷ್ಠಿಗಳು ಸ್ತ್ರೀ ಮಾತ್ರರಾದ ವರನ್ನು ತ್ಯಾಜ್ಯಮಾಡಿ, ಮೋಕ್ಷಲಕ್ಷ್ಮಿಯೆಂಬ ರಮಣಿಯ ಸಮಾಗಮ ಕ್ಕೋಸ್ಕರ ದಿನ ರಾತ್ರಿ ಪ್ರಯತ್ನಶೀಲರಾಗಿರುತ್ತಾರೋ ಮತ್ತು ಚಿದಾನಂ ದಮಯನಾದ ನಿಜಾತ್ಮನಲ್ಲಿ ಲೀನವಾಗಿರಲು ಯಾವಾಗಲೂ ಪ್ರಯತ್ನ ಮಾಡುತ್ತಿರುತ್ತಾರೋ ಅಂತಹ ಆಚಾರ್ಯರ ಸ್ತೋತ್ರವನ್ನು ನಾನು ಮಾ ಡುತ್ತೇನೆ. ಇದು ಉತ್ತಮ ಬ್ರಹ್ಮಚರ್ಯವೆಂಬ ಧರ್ಮವು.

**ಸ್ವರ್ಮೋಕ್ಷದಾಯಿನೋ ಹೃದ್ಯಾ ಭವಕ್ಲೇಶವಿನಾಶಿನಃ।**
**ಮಂದಬುಧ್ಯಾ ಮಯಾ ಹ್ಯೇತೇ ದಶಧರ್ಮಾಸ್ತು ವರ್ಣಿತಾಃ॥೧೦೭॥**

ಅರ್ಥ—ಮೇಲೆ ಹೇಳಿದ ದಶಧರ್ಮಗಳು ಸ್ವರ್ಗಮೋಕ್ಷಗಳನ್ನು ಪ್ರಾಪ್ತಿಮಾಡಿಸುವವು. ಎಲ್ಲರ ಮನಸ್ಸನ್ನಾಕರ್ಷಿಸುವಂತವುಗಳು. ಎಲ್ಲಾ ಕ್ಲೇಶಗಳನ್ನು ನಾಶಮಾಡತಕ್ಕವುಗಳು. ಇಂತಹ ಉತ್ತಮಕ್ಷಮಾದಿ ದಶಧರ್ಮಗಳನ್ನು ನಾನು ನನ್ನ ಅಲ್ಪಬುದ್ಧಿಗನುಸಾರವಾಗಿ ವರ್ಣಿಸಿದೆನು.

## ಆರು ಆವಶ್ಯಕ ಕ್ರಿಯೆಗಳು.

**ಷಣ್ಣಾಮಾವಶ್ಯಕಾನಾಂ ತು ಭವಕ್ಲೇಶವಿನಾಶಿನಾಮ್।**
**ವ್ಯಾಧ್ಯಾದಿನಾಶಕಾನಾಂ ಚ ವರ್ಣನಂ ಕ್ರಿಯತೇಽಧುನಾ ॥ ೧೦೮ ॥**

ಅರ್ಥ—ಸಮತಾ ಮೊದಲಾದ ಆರು ಆವಶ್ಯಕ ಕ್ರಿಯೆಗಳು ಸಂಸಾರದ ಎಲ್ಲಾ ಕ್ಲೇಶಗಳನ್ನು ನಾಶ ಮಾಡತಕ್ಕವುಗಳು. ಮತ್ತು ಆಧಿ-ವ್ಯಾಧಿ-ಉಪಾಧಿ ಮೊದಲಾದ ಎಲ್ಲಾ ರೋಗಗಳನ್ನು ದೂರ ಮಾಡತಕ್ಕವುಗಳು. ಇಂತಹ ಆವಶ್ಯಕಕ್ರಿಯೆಗಳ ವರ್ಣನೆಯು ಈಗ ನನ್ನಿಂದ ಮಾಡಲಾಗುತ್ತದೆ.

**ರಾಗದ್ವೇಷೌ ಪರಿತ್ಯಜ ಸಮಂ ಜಾನನ್ ಪ್ರಿಯಾಪ್ರಿಯೌ ॥**
**ಪದಾರ್ಥೌ ಯತತೇ ಧ್ಯಾತುಂ ಸ್ವಾತ್ಮಾನಂ ಪ್ರಣಮಾಮಿ ತಂ ॥೧೦೯**

ಅರ್ಥ—ಯಾವ ಆಚಾರ್ಯಪರಮೇಷ್ಠಿಗಳು ರಾಗ-ದ್ವೇಷಗಳನ್ನು ಬಿಟ್ಟು, ಪ್ರಿಯ ಮತ್ತು ಅಪ್ರಿಯಗಳಾದ ಎಲ್ಲಾ ವಸ್ತುಗಳನ್ನು ಸಮಾನವೆಂದು ತಿಳಿದು, ಎಲ್ಲಾ ವಸ್ತುಗಳಲ್ಲಿಯೂ ಸಮತಾಭಾವವನ್ನು ಧಾರಣೆ ಮಾಡುತ್ತಾರೋ ಯಾವಾಗಲೂ ತನ್ನ ಆತ್ಮನ ಧ್ಯಾನ ಮಾಡುವುದರಲ್ಲಿ ಪ್ರಯತ್ನಶೀಲರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಸಮತಾ ಎಂಬ ಮೊದಲನೆ ಆವಶ್ಯಕ ಕ್ರಿಯೆಯು.

**ಭಕ್ತ್ಯಾರ್ಹತಾಂ ಸದಾ ಮುಖ್ಯೇ ವಂದನಾಂ ಕುರುತೇ ಯತಿಃ ।**
**ಏಕಸ್ಯೈವಂ ಸ ಶುಧ್ಧಾತ್ಮಾ ವಂದನಾಪ್ರವಿಧಾಯಕಃ ॥೧೧೦॥**

ಅರ್ಥ—ಯಾವ ಆಚಾರ್ಯರು ಅರಹಂತರ ಮಧ್ಯದಲ್ಲಿ ಅರಹಂತ ರೊಬ್ಬರನ್ನು ಭಕ್ತಿಪೂರ್ವಕವಾಗಿ ವಂದನೆ ಮಾಡುತ್ತಾರೋ ಆ ಪರಿಶು ಧ್ಧಾತ್ಮನನ್ನು ಧರಿಸುವ ಆಚಾರ್ಯರು "ವಂದನಾ" ಎಂಬ ಆವಶ್ಯಕ ಕ್ರಿಯೆಯನ್ನು ಧಾರಣೆ ಮಾಡುವವರೆಂದು ಹೇಳಲ್ಪಡುತ್ತಾರೆ. ಇದು ವಂದನೆ ಎಂಬ ಎರಡನೇ ಆವಶ್ಯಕಕ್ರಿಯೆಯು.

**ಯೋಽರ್ಹತಾಂ ಮೋಕ್ಷದಾನಾಂ ಹಿ ಸ್ತುತ್ಯಾಮೋಕ್ಷೋ ಭವೇದಿತಿ**
**ಜ್ಞಾತ್ವಾ ಕುರ್ವನ್ ಸ್ತವಂ ನಿತ್ಯಂ ತೃಪ್ತಃ ಸ್ವಾತ್ಮನಿ ನೌಮಿ ತಂ ॥**

ಅರ್ಥ—ಶ್ರೀ ಅರಹಂತ ದೇವರು ಮೋಕ್ಷವನ್ನು ಅನುಗ್ರಹಿಸು ವರು. ಆದುದರಿಂದಲೇ ಅವರ ಸ್ತೋತ್ರವನ್ನು ಮಾಡುವುದರಿಂದ ಅವಶ್ಯ ವಾಗಿಯೂ ಮೋಕ್ಷ ಪ್ರಾಪ್ತಿಯಾಗುತ್ತದೆ. ಇದನ್ನೇ ತಿಳಿದು ಆಚಾರ್ಯರು ನಿರಂತರ ಅರಹಂತರ ಸ್ತುತಿಮಾಡುತ್ತಿರುತ್ತಾರೆ. ಮತ್ತು ತನ್ನ ಶುದ್ಧಾತ್ಮ ನಲ್ಲಿ ತೃಪ್ತರಾಗಿರುತ್ತಾರೆ. ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸು ವೆನು. ಇದು ಸ್ತುತಿ ಎಂಬ ಮೂರನೇ ಆವಶ್ಯಕಕ್ರಿಯೆಯು.

**ಪಕ್ಷಾದಿಕೇ ಕೃತಂ ದೋಷಂ ಗುರವೇ ಯೋ ನಿವೇದಯೇತ್ ।**
**ಪ್ರತಿಕ್ರಮಣಮಾಕುರ್ವನ್ ಶುದ್ಧಸ್ತಿಷ್ಠತಿ ನೌಮಿ ತಂ ॥ ೧೧೨ ॥**

ಅರ್ಥ—ಯಾವ ಆಚಾರ್ಯರು ಪಕ್ಷ, ಮಾಸ ಮತ್ತು ವರ್ಷಗಳಲ್ಲಿ ಮಾಡಿದ ಅಥವಾ ಪ್ರಮಾದದಿಂದುಂಟಾದ ದೋಷಗಳನ್ನು ತನ್ನ ಗುರುಗ ಳೊಡನೆ ನಿವೇದನೆ ಮಾಡಿ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳುತ್ತಾರೋ ಅಂತಹ ಆಚಾರ್ಯಪರಮೇಷ್ಠಿಗಳಿಗೆ ನಾನು ನಮಸ್ಕರಿಸುವೆನು. ಇದು ಪ್ರತಿಕ್ರಮಣೆ ಎಂಬ ನಾಲ್ಕನೇ ಆವಶ್ಯಕಕ್ರಿಯೆಯು.

**ಅತೀತೇಽನಾಗತೇ ಕಾಲೇ ಕೃತದೋಷಂ ತ್ಯಜನ್ ಧ್ರುವಂ ।**
**ಪ್ರತ್ಯಾಖ್ಯಾನಂ ಸದಾ ಕುರ್ವನ್ ಲೀನಃ ಸ್ವಾತ್ಮನಿ ನೌಮಿ ತಂ ॥**

ಅರ್ಥ—ಯಾವ ಆಚಾರ್ಯರು ಭೂತಕಾಲ ಮತ್ತು ಭವಿಷ್ಯತ್ಕಾಲಗ ಳಲ್ಲಿ ಮಾಡಿರುವ ಎಲ್ಲಾ ದೋಷಗಳನ್ನು ಪರಿಹಾರ ಮಾಡುತ್ತಾರೋ ನಿರಂತರ ಪ್ರತ್ಯಾಖ್ಯಾನ ಮತ್ತು ತ್ಯಾಗವನ್ನು ಮಾಡಿ ತನ್ನ ನಿಜಾತ್ಮಾನು ಭವದಲ್ಲಿ ಲೀನರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ನಮಸ್ಕಾರ

ಮಾಡುತ್ತೇನೆ ಇದು ಪ್ರತ್ಯಾಖ್ಯಾನವೆಂಬ ಐದನೇ ಆವಶ್ಯಕ ಕ್ರಿಯೆಯು.

**ದೇಹಾದ್ಭಿನ್ನೋಽಸ್ಮಿ ಚೈತನ್ಯರೂಪೋಽಸ್ಮೀತಿ ನಿಜಂ ಸ್ಮರನ್ ।**
**ವ್ಯುತ್ಸರ್ಗಂ ಧಾರಯನ್ನಿತ್ಯಂ ತೃಪ್ತಃ ಸ್ವಾತ್ಮನಿ ನೌಮಿ ತಂ ॥೧೧೪॥**

ಅರ್ಥ—ನಾನು, ಈ ಪುದ್ಗಲಪಿಂಡವೂ, ನಾಶಮಯವೂ ಆದ ಶರೀರದಿಂದ ಬೇರೆಯಾಗಿರುವೆನು. ಶುದ್ಧಚೈತನ್ಯಸ್ವರೂಪನಾಗಿರುವೆನು. ಹೀಗೆ ನಿಜಾತ್ಮನ ಸ್ವರೂಪವನ್ನು ಚಿಂತಿಸುವ ಆಚಾರ್ಯರು ವ್ಯುತ್ಸರ್ಗವೆಂಬ ಆವಶ್ಯಕಕ್ರಿಯೆಯನ್ನು ಧಾರಣೆ ಮಾಡುತ್ತಾರೆ. ಹಾಗೇನೇಯೇ ತನ್ನ ಪರಿಶುದ್ಧಾತ್ಮನಲ್ಲಿ ಸಂತೋಷವುಳ್ಳವರಾಗಿರುತ್ತಾರೆ. ಅಂತಹ ಆಚಾರ್ಯರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ವ್ಯುತ್ಸರ್ಗವೆಂಬ ಆರನೇ ಆವಶ್ಯಕಕ್ರಿಯೆಯು.

**ಷಡ್ವಿಧಾನಾಂ ಹಿ ಚೈತೇಷಾಂ ವರ್ಣನಂ ಕ್ಲೇಶನಾಶಕಂ ।**
**ಆವಶ್ಯಕಗುಣಾನಾಂ ಹಿ ಕಾಮದಂ ಮೋಕ್ಷದಂ ಕೃತಂ ॥ ೧೧೫ ॥**

ಅರ್ಥ—ಹೀಗೆ ಆಚಾರ್ಯಪರಮೇಷ್ಠಿಗಳ ಯಾವ ಆರು ಆವ್ಯಶಕ ಕ್ರಿಯೆಗಕಕ್ರಿಯೆಗಳಿವೆಯೋ ಅವೆಲ್ಲವೂ ಸಂಸಾರದ ಎಲ್ಲಾ ಸಂತಾಪಗಳನ್ನು ದೂರಮಾಡುವವು. ಮತ್ತು ಮೋಕ್ಷವನ್ನು ಪ್ರಾಪ್ತಿಮಾಡಿಸುವವು. ಅದನ್ನೇ ನಾನು ವರ್ಣಿಸಿದೆನು.

## ಪಂಚಾಚಾರಗಳ ವರ್ಣನೆ.

**ಶಾಂತಿಸೌಖ್ಯಕರಾ ನಿತ್ಯಂ ಪಂಚಾಚಾರಾಃ ಸುಖಪ್ರದಾಃ ॥**
**ವರ್ಣ್ಯಂತೇ ಕಾಮದಾ ವಂದ್ಯಾ ಭವತಾಪವಿನಾಶಕಾಃ ॥ ೧೧೬ ॥**

ಅರ್ಥ—ದರ್ಶನಾಚಾರ ಮೊದಲಾದ ಪಂಚಾಚಾರಗಳು ಶಾಂತಿ ಮತ್ತು ಸುಖಗಳನ್ನುಂಟು ಮಾಡುವಂತವುಗಳು. ಯಾವಾಗಲೂ ಸುಖದಾಯಕಗಳಾಗಿರುವವು ವಂದಿಸಲು ಯೋಗ್ಯವಾದವುಗಳು. ಮತ್ತು ಭವ್ಯಜೀವರ ಸರ್ವಸಂತಾಪಗಳನ್ನು ದೂರಗೊಳಿಸುವಂತವುಗಳು. ಈಗ ಈ ಪಂಚಾಚಾರಗಳ ವರ್ಣನೆಯನ್ನು ಮಾಡುವೆನು.

**ಪಂಚವಿಂಶತಿ ದೋಷೇಭ್ಯೋ ರಹಿತಂ ದರ್ಶನಂ ದಧತ್ ।**
**ತತ್ತ್ವಶ್ರದ್ಧಾಂ ನಿಜೇ ಕುರ್ವನ್ ಲೀನಃ ಸ್ವಾತ್ಮನಿ ನೌಮಿ ತಂ ॥೧೧೭**

ಅರ್ಥ—ಯಾವ ಆಚಾರ್ಯರು ೨೫ ದೋಷಗಳಿಂದ ರಹಿತವಾದ ಸಮ್ಯಗ್ದರ್ಶನವನ್ನು ಧಾರಣೆ ಮಾಡುತ್ತಾರೆಯೋ ಹಾಗೇನೆಯೇ ತನ್ನ ನಿಜಾತ್ಮನಲ್ಲಿ ಜೀವಾದಿ ಸಪ್ತತತ್ವಗಳ ಶ್ರದ್ಧಾನವನ್ನು ಬಗೆಯುತ್ತಾರೋ ಮತ್ತು ತನ್ನ ನಿಜಾತ್ಮನಲ್ಲಿ ಲೀನರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುವೆನು, ಇದು ದರ್ಶನಾಚಾರವೆಂಬ ಮೊದಲನೆಯ ಆಚಾರವು.

**ಯೇನಾತ್ಮಾ ಬುಧ್ಯತೇ ನಿತ್ಯಂ ಮೋಹಾಚ್ಚೇತೋ ನಿವರ್ತ್ಯತೇ ।**
**ತಜ್ ಜ್ಞಾನಂ ಹೃದಿ ಸಂಸ್ಥಾಪ್ಯ ನಿಜೇ ತೃಪ್ತೋಽಸ್ತಿ ನೌಮಿ ತಂ ॥**

ಅರ್ಥ–ಯಾವ ಜ್ಞಾನದ ಮೂಲಕ ನಿರಂತರ ಆತ್ಮಸ್ವರೂಪವನ್ನು ತಿಳಿಯಲಾಗುತ್ತದೆಯೋ, ಹಾಗೆನೇಯೇ ಯಾವ ಜ್ಞಾನದ ಮೂಲಕ ತನ್ನ ಹೃದಯವು ಮೋಹನೀಯಕರ್ಮವೆಂಬ ಅಂಧಕಾರದಿಂದ ಬಿಡುಗಡೆಯನ್ನು ಹೊಂದಿ ಸ್ವಪರಪ್ರಕಾಶವನ್ನು ಪಡೆಯುತ್ತದೆಯೋ ಅಂತಹ ಜ್ಞಾನ ಅಂದರೆ ಸಮ್ಯಗ್ಜ್ಞಾನವನ್ನು ತನ್ನ ಹೃದಯಲ್ಲಿ ಸ್ಥಾಪಿಸಿ ಆಚಾರ್ಯರು ತನ್ನ ನಿಜಾತ್ಮನಲ್ಲಿ ಏಕರೂಪರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ವಂದಿಸುತ್ತೇನೆ. ಇದು ಜ್ಞಾನಾಚಾರವೆಂಬ ಎರಡನೆಯ ಆಚಾರವು.

**ಪಂಚಧಾಚಾರಮಾಸ್ಕಂದನ್ ಪರಾನಾಚಾರಯನ್ ಧ್ರುವಂ ।**
**ನಿತ್ಯಂ ತಿಷ್ಠತಿ ಸ್ವೇ ಸ್ಥಾನೇ ಭಕ್ತ್ಯಾ ಯೋ ನೌಮಿ ತಂ ಮುದಾ ॥**

ಅರ್ಥ—ಯಾವ ಆಚಾರ್ಯರು ಐದು ಪ್ರಕಾರಗಳಾದ ಆಚಾರಗಳನ್ನು ಅಥವಾ ಸಂಪೂರ್ಣಚಾರಿತ್ರವನ್ನು ತಾನಾಗಿ ಪಾಲಿಸುತ್ತಾರೋ, ಹಾಗೇನೆಯೇ ಬೇರೆ ಮುನೀಶ್ವರರುಗಳಿಂದ ಪಾಲನೆ ಮಾಡಿಸುತ್ತಾರೋ ಮತ್ತು ತನ್ನ ನಿಜಾತ್ಮಾನುಭವದಲ್ಲಿ ಸದಾ ನಿರತರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುತ್ತೇನೆ. ಇದು ಚಾರಿತ್ರಾಚಾರವೆಂಬ ಮೂರನೇ ಆಚಾರವು.

**ಯೋ ದ್ವಾದಶತಪಃ ಕುರ್ವನ್ ಮೋಕ್ಷದಂ ಕಾರಯನ್ ಪರಾನ್**
**ಸ್ವರಸೇ ಸ್ಥಾಪಯನ್ ತಿಷ್ಠೇನ್ನಿಜೇ ಹ್ಯಾತ್ಮನಿ ನೌಮಿ ತಂ ॥ ೧೨೦ ॥**

ಅರ್ಥ—ಯಾವ ಆಚಾರ್ಯರು ಮೋಕ್ಷಪ್ರಾಪ್ತಿಯಾಗುವ ಹನ್ನೆರಡು ಬಗೆಯ ತಪಸ್ಸುಗಳನ್ನು ತಾನಾಗಿ ಪಾಲಿಸಿಯೂ, ಬೇರೆ ಮುನಿಗಳಿಂದ ಪಾಲಿಸಲ್ಪಡುವಂತೆ ಮಾಡಿಯೂ, ಹಾಗೇನೇಯೇ ಅನ್ಯ ಭವ್ಯಾತ್ಮರುಗಳನ್ನು ಅವರ ಆತ್ಮಜನ್ಯಚಿದಾನಂದರಸದಲ್ಲಿ ಲವಲೀನರನ್ನಾಗಿ ಮಾಡುತ್ತಾರೋ ಮತ್ತು ತನ್ನ ಶುದ್ಧಾತ್ಮರಸದಲ್ಲಿ ತದೇಕಚಿತ್ತರಾಗಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ನಮಸ್ಕರಿಸುವೆನು. ಇದು ತಪವೆಂಬ ನಾಲ್ಕನೇ ಆಚಾರವು.

**ಸ್ವಾತ್ಮಾನಂ ಮೋಚಯೇದನ್ಯಾತ್ ಸ್ವಪದೇ ಸ್ಥಾಪಯೇದ್ಧ್ರುವಂ ।**
**ಸ್ವರಾಜ್ಯಾಯ ಸ್ವವೀರ್ಯೇಣ ಯತತೇ ನೌಮಿ ತಂ ಮುದಾ॥೧೨॥**

ಅರ್ಥ—ಯಾವ ಆಚಾರ್ಯರು ತನ್ನ ವೀರ್ಯಾಚಾರವಿಂದಲೂ ಅಥವಾ ನಿಜಾತ್ಮಬಲದಿಂದಲೂ, ತನ್ನ ಆತ್ಮನನ್ನು ಬೇರೆ ಎಲ್ಲಾ ವಸ್ತುಗಳಿಂದಲೂ ಬೇರೆ ಮಾಡುತ್ತಾರೋ, ನಿಜಾತ್ಮನನ್ನು ತನ್ನ ಆತ್ಮಜನ್ಯ ಸ್ವರಾಜ್ಯದ ಪ್ರಾಪ್ತಿಗಾಗಿ ತನ್ನ ಪರಿಶುದ್ಧಾತ್ಮನಲ್ಲಿ ಮಗ್ನರಾಗಿರುತ್ತಾರೋ ಅಥವಾ ಶುದ್ಧಾತ್ಮನ ಪ್ರಾಪ್ತಿಗಾಗಿ ಸದಾ ಪ್ರಯತ್ನಿಸುತ್ತಿರುತ್ತಾರೋ ಅಂತಹ ಆಚಾರ್ಯರಿಗೆ ನಾನು ಪ್ರಸನ್ನಚಿತ್ತನಾಗಿ ನಮಸ್ಕಾರಮಾಡುತ್ತೇನೆ. ಇದು ವೀರ್ಯಾಚಾರವೆಂಬ ಐದನೇ ಆಚಾರವು.

**ಸ್ವರ್ಮೋಕ್ಷದಾಯಕಾಃ ಪೂತಾ ಭವದುಃಖನಿವಾರಕಾಃ ॥**
**ಪಂಚಧಾಪಿ ಮಯಾಚಾರಾ ವರ್ಣಿತಾ ಹಿತಕಾರಕಾಃ ॥ ೧೩ ॥**

ಅರ್ಥ—ಈ ಐದು ಪ್ರಕಾರಗಳಾದ ಆಚಾರಗಳು ಸ್ವರ್ಗಮೋಕ್ಷಗಳನ್ನುಂಟುಮಾಡತಕ್ಕವುಗಳು. ಪವಿತ್ರವಾದವುಗಳು. ಸಂಸಾರದ ದುಃಖಗಳನ್ನು ನಾಶಮಾಡತಕ್ಕವುಗಳು. ಮತ್ತು ಎಲ್ಲರ ಹಿತವನ್ನು ಮಾಡತಕ್ಕವುಗಳು. ಹೀಗೆ ಐದು ಪ್ರಕಾರವಾದ ಆಚಾರಗಳ ಸ್ವರೂಪವನ್ನು ನಾನು ವರ್ಣಿಸಿದೆನು.

## ಗುಪ್ತಿತ್ರಯಗಳ ವರ್ಣನೆ.

**ವರ್ಣ್ಯಂತೇ ಗುಪ್ತಯಃ ಪೂತಾ ಭವವಹ್ನಿವಿನಾಶಿಕಾಃ ।**
**ಸ್ವರಾಜ್ಯದಾಯಿಕಾ ಹೃದ್ಯಾ ನಿಜಭಾವವಿಭೋಧಿಕಾಃ ॥೧೪॥**

ಅರ್ಥ—ಇನ್ನು ಮುಂದೆ ಮೂರು ಗುಪ್ತಿಗಳ ಸ್ವರೂಪವನ್ನು ಹೇಳಲಾಗುತ್ತದೆ. ಮನವಚನಕಾಯಗಳೆಂಬ ಮೂರು ಗುಪ್ತಿಗಳು ಸಂಸಾರವೆಂಬ ಅಗ್ನಿಯನ್ನು ನಾಶಮಾಡುವಂತವುಗಳು. ಆತ್ಮನ ಶುದ್ಧಸ್ವರೂಪವೆಂಬ ಸ್ವರಾಜ್ಯವನ್ನು ಕೊಡುವಂತವುಗಳು. ಹೃದಯಕ್ಕೆ ಸಂತೋಷವನ್ನುಂಟುಮಾಡುವವು. ಮತ್ತು ತನ್ನ ಆತ್ಮಸ್ವರೂಪವನ್ನು ತಿಳಿಸತಕ್ಕಂತವುಗಳು.

**ಮೋಚಯಿತ್ವಾऽಶುಭಾಚ್ಚಿತ್ತಂ ಶುಭೇ ಸಂಸ್ಥಾಪ್ಯ ಕಾಮದೇ।**
**ಶುಭಾದಪಿ ನಿಜೇ ಲೀನಂ ಮನೋಗುಪ್ತಿಧರಂ ಸ್ತುವೇ ॥ ೧೨೪ ॥**

ಅರ್ಥ—ಯಾವ ಆಚಾರ್ಯರು ತನ್ನ ಮನಸ್ಸನ್ನು ಅಶುಭಧ್ಯಾನಗಳಿಂದ ಬಿಡಿಸಿ ಇಷ್ಟಾರ್ಥವನ್ನು ಪೂರೈಸುವ ಶುಭಧ್ಯಾನದಲ್ಲಿ ಸ್ಥಾಪಿಸುತ್ತಾರೆ. ಮರಳಿ ಶುಭಧ್ಯಾನದಿಂದಲೂ ಬಿಡಿಸಿ ನಿಜಾತ್ಮನಲ್ಲಿ ಲೀನರಾಗುತ್ತಾರೆ. ಇಂತಹ ಮನೋಗುಪ್ತಿಯನ್ನು ಧಾರಣೆ ಮಾಡುವ ಆಚಾರ್ಯರ ಸ್ತುತಿಯನ್ನು ನಾನು ಮಾಡುವೆನು. ಇದು ಮನೋಗುಪ್ತಿಯೆಂಬ ಮೊದಲನೇ ಗುಪ್ತಿಯು.

**ಶಾಸ್ತ್ರಬಾಹ್ಯಂ ವಚಸ್ತ್ಯಕ್ತ್ವಾ ಮೌನಂ ಸಂದಧತೇ ಯತಿಃ ।**
**ವಚೋಗುಪ್ತಿಧರಂ ನೌಮಿ ಸ್ವಾತ್ಮಧ್ಯಾನಪರಾಯಣಃ ॥ ೧೨೫ ॥**

ಅರ್ಥ—ಯಾವ ಆಚಾರ್ಯರು ಶಾಸ್ತ್ರಬಾಹ್ಯಗಳಾದ ಎಲ್ಲಾ ವಚನಗಳನ್ನು ಬಿಟ್ಟು ನಿರಂತರ ಮೌನವನ್ನು ಧಾರಣೆ ಮಾಡುತ್ತಾರೆ. ತನ್ನ ಆತ್ಮಧ್ಯಾನದಲ್ಲಿ ಯಾವಾಗಲೂ ಲೀನರಾಗಿರುತ್ತಾರೆ. ಇಂತಹ ವಚನಗುಪ್ತಿಧಾರಿಗಳಾದ ಆಚಾರ್ಯರಿಗೆ ನಾನು ನಮಸ್ಕರಿಸುವೆನು. ಇದು ವಚನಗುಪ್ತಿಯೆಂಬ ಎರಡನೇ ಗುಪ್ತಿಯು.

**ಮೋಚಯಿತ್ವಾ ವಪುಃ ಪಾಪಾತ್ ಕಾಯಗುಪ್ತಿಂ ದಧನ್ ಮುನಿಃ।**
**ಸ್ವಾತ್ಮಕಾರ್ಯರತೋ ಯೋ ಹಿ ತಂ ನಮಾಮಿ ಸ್ವಶುದ್ಧಯೇ ೧೨೬**

ಅರ್ಥ—ಯಾವ ಆಚಾರ್ಯರು ತನ್ನ ಶರೀರವನ್ನು ಎಲ್ಲಾ ಪಾಪಕಾರ್ಯಗಳಿಂದ ಬಿಡಿಸಿ ಕಾಯಗುಪ್ತಿಯನ್ನು ಧರಿಸುತ್ತಾರೆ. ಮತ್ತು ತನ್ನ ಆತ್ಮನನ್ನು ಪರಿಶುದ್ಧಮಾಡುವ ಕಾರ್ಯದಲ್ಲಿ ನಿರಂತರ ಮಗ್ನರಾಗಿರು

ಸ್ತಾರೆ. ಇಂತಹ ಆಚಾರ್ಯಪರಮೇಷ್ಠಿಗಳಿಗೆ ನಾನು ನನ್ನ ಆತ್ಮಶುದ್ಧಿಗಾಗಿ ನಮಸ್ಕಾರಮಾಡುತ್ತೇನೆ.

**ಗುಪ್ತಯೋ ವರ್ಣಿತಾಃ ಪೂತಾಃ ಜನ್ಮಮೃತ್ಯುವಿನಾಶಿಕಾಃ ।**
**ಷಟ್ಖಂಡರಾಜ್ಯದಾಯಿನ್ಯೋ ಮೋಕ್ಷಸೌಖ್ಯವಿಧಾಯಕಾಃ ॥ ೧೨೭ ॥**

ಅರ್ಥ—ಈ ಮೂರು ಗುಪ್ತಿಗಳು ಅತ್ಯಂತಪವಿತ್ರಸ್ವರೂಪಗಳಾಗಿಯೂ, ಜನ್ಮ—ಮರಣಗಳನ್ನು ನಾಶಮಾಡುವಂಥವುಗಳಾಗಿಯೂ ಮತ್ತು ಆರುಖಂಡಗಳ ಚಕ್ರಾಧಿಪತ್ಯವನ್ನು ಕೊಡುವಂಥವುಗಳಾಗಿಯೂ, ಕೊನೆಗೆ ಮೋಕ್ಷಸುಖವನ್ನು ಪ್ರಾಪ್ತಿಮಾಡಿಸುವಂತವುಗಳಾಗಿಯೂ ಇವೆ.

**ಏವಂ ಹಿ ವರ್ಣಿತಾಃ ಹ್ಯೇತೇ ಆಚಾರ್ಯಪರಮೇಷ್ಠಿನಃ ।**
**ಷಟ್ತ್ರಿಂಶದ್ಧಿ ಗುಣಾಃ ಪೂತಾಃ ಸಂಸಾರಕ್ಲೇಶನಾಶಕಾಃ ॥ ೧೨೮ ॥**

ಅರ್ಥ—ಈ ರೀತಿಯಾಗಿ ನನ್ನಿಂದ ಆಚಾರ್ಯಪರಮೇಷ್ಠಿಗಳ ಪವಿತ್ರವೂ ಮತ್ತು ಸಂಸಾರದ ಸರ್ವಸಂತಾಪಗಳನ್ನು ನಾಶಮಾಡತಕ್ಕವುಗಳಾದ ೩೬ ಮೂಲಗುಣಗಳ ವರ್ಣನೆಯು ಮಾಡಲ್ಪಟ್ಟಿತು.

## ಉಪಾಧ್ಯಾಯ ಪರಮೇಷ್ಠಿಗಳ ಗುಣ.

**ಉಪಾಧ್ಯಾಯಸ್ಯ ವರ್ಣ್ಯಂತೇ ಪೂತಾಃ ಸ್ವರ್ಮೋಕ್ಷದಾ ಗುಣಾಃ ॥**
**ಪಂಚವಿಂಶತಿ ಸಂಖ್ಯಾಕಾ ವಾಂಛಿತಾರ್ಥಪ್ರದಾಯಿನಃ ॥೧೨೯॥**

ಅರ್ಥ—ಇನ್ನು ಮುಂದೆ ನನ್ನಿಂದ ಉಪಾಧ್ಯಾಯ ಪರಮೇಷ್ಠಿಗಳ ೨೫ ಗುಣಗಳ ವರ್ಣನೆಯು ಮಾಡಲ್ಪಡುತ್ತದೆ. ಈ ಗುಣಗಳೆಲ್ಲವೂ ಪವಿತ್ರವಾದವುಗಳು. ಸ್ವರ್ಗಮೋಕ್ಷವನ್ನು ಕೊಡುವಂತವುಗಳು. ಮತ್ತು ಇಚ್ಛಿತ ಫಲವನ್ನು ಕೊಡತಕ್ಕವುಗಳು.

**ಆಚಾರಾಂಗಂ ಪಠೇನ್ನಿತ್ಯಂ ಮುನಿಶ್ರಾವಕಗೋಚರಂ ॥**
**ಪಾಠಯಂಶ್ಚ ಪರಾನ್ ಭವ್ಯಾನ್ ನೌಮಿ ತಂ ಸ್ವರಸೇ ರತಂ॥೧೩೦॥**

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ಮುನಿ ಮತ್ತು ಶ್ರಾವಕನ ಎಲ್ಲಾ ಕ್ರಿಯೆಗಳನ್ನು ಹೇಳುವ ಆಚಾರಾಂಗವೆಂಬ ಮೊದ

ಲನೇ ಅಂಗಶಾಸ್ತ್ರವನ್ನು ದಿವಸಾಗಲೂ ಓದುತ್ತಾರೆ, ಮತ್ತು ಬೇರೆ ಭವ್ಯ ಜೀವರುಗಳಿಗೆ ಓದಿಸುತ್ತಾರೆ, ಹಾಗೇನೇಯೇ ನಿರಂತರ ತನ್ನ ಆತ್ಮರಸಾನುಭವದಲ್ಲಿ ಲೀನರಾಗುತ್ತಾರೆ, ಇಂತಹ ಉಪಾಧ್ಯಾಯ ಪರಮೇಷ್ಠಿಗಳಿಗೆ ನಾನು ನಮಸ್ಕರಿಸುವೆನು. ಇದು ಆಚಾರಾಂಗವೆಂಬ ಮೊದಲನೇ ಅಂಗವು.

**ಪಠನ್ ಸೂತ್ರಕೃತಾಂಗಂ ಯೋ ದೀಕ್ಷಾಭೇದಾದಿಬೋಧಕಂ।**
**ಅನ್ಯಾಂಶ್ಚ ಪಾಠಯನ್ ದಕ್ಷಃ ಸ್ವಕಾರ್ಯೇ ನೌಮಿ ತಂ ಸದಾ೧೩೧**

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ದೀಕ್ಷಾಭೇದ ಮೊದಲಾದವುಗಳನ್ನು ಹೇಳತಕ್ಕ ಸೂತ್ರಕೃತಾಂಗವೆಂಬ ಶಾಸ್ತ್ರವನ್ನು ಸ್ವತಃ ಅಧ್ಯಯನ ಮಾಡುತ್ತಾರೆ, ಬೇರೆ ಭವ್ಯಜೀವರುಗಳಿಗೆ ಅಧ್ಯಯನ ಮಾಡಿಸುತ್ತಾರೆ, ಹಾಗೇನೆಯೇ ನಿಜಾತ್ಮನ ಅವಲೋಕನಕಾರ್ಯದಲ್ಲಿ ತಲ್ಲೀನರಾಗಿರುತ್ತಾರೆ. ಇಂತಹ ಉಪಾಧ್ಯಾಯರಿಗೆ ನಾನು ನಿರಂತರ ನಮಸ್ಕರಿಸುವೆನು. ಇದು ಎರಡನೇ ಸೂತ್ರಕೃತಾಂಗವೆಂಬ ಗುಣವು.

**ಸ್ಥಾನಾಂಗಂ ಪಾಠಯನ್ ಭವ್ಯಾನ್ ವಸ್ತುಭಾವಾದಿಬೋಧಕಂ ॥**
**ಪಠಂಶ್ಚ ಸ್ವಗೃಹಂ ಗಂತುಂ ಯತತೇ ಸ್ತೌಮಿ ತಂ ಮುದಾ ॥೧೩೨**

ಅರ್ಥ—ವಾಸ್ತವಿಕ ವಸ್ತುತತ್ವಗಳನ್ನು ಪ್ರಕಟಿಸುವ ಸ್ಥಾನಾಂಗವೆಂಬ ಶಾಸ್ತ್ರವನ್ನು ಶ್ರೀ ಉಪಾಧ್ಯಾಯರು ಸ್ವಯಂ ಓದುತ್ತಾರೆ ಮತ್ತು ಭವ್ಯಜೀವರಿಗೆ ಓದಿಸುತ್ತಾರೆ. ಹಾಗೇನೆಯೇ ಮೋಕ್ಷರೂಪವಾದ ತನ್ನ ಮನೆಗೆ ಹೋಗಲು ಸದಾ ಪ್ರಯತ್ನಶೀಲರಾಗಿರುತ್ತಾರೆ. ಅಂಥವರಿಗೆ ನಾನು ಸಂತೋಷಪೂರ್ವಕವಾಗಿ ನಮಸ್ಕರಿಸುವೆನು. ಇದು ಸ್ಥಾನಾಂಗವೆಂಬ ಮೂರನೇ ಗುಣವು.

**ಪಾಠಯನ್ ಸಮವಾಯಾಂಗಂ ಪಠನ್ ಜೀವಾದಿಗೋಚರಂ।**
**ಪರಾನ್ ಸ್ಥಾನೇ ನಿಜೇ ಸ್ಥಾತುಂ ಯತತೇ ಯೋ ಹಿ ನೌಮಿ ತಂ॥**

ಅರ್ಥ—ಯಾವುದು ಜೀವ ಮತ್ತು ಅಜೀವ ಮೊದಲಾದ ಪದಾರ್ಥಗಳ ಉತ್ಪತ್ತಿ ಸ್ಥಿತಿ ಮೊದಲಾದುವುಗಳನ್ನು ತಿಳಿಸುವುದೋ ಅಂತಹ ಸಮವಾಯಾಂಗವೆಂಬ ಅಂಗವನ್ನು ಉಪಾಧ್ಯಾಯರು ತಾನಾಗಿ ಅಧ್ಯಯನ ಮಾಡುತ್ತಾರೆ. ಬೇರೆ ಭವ್ಯಜೀವರುಗಳಿಗೆ ಅಧ್ಯಯನಮಾಡಿಸುತ್ತಾರೆ.

ಹಾಗೇನೆಯೇ ತನ್ನ ಮೋಕ್ಷರೂಪವಾದ ಸ್ವಸ್ಥಾನದಲ್ಲಿರಲು ಸದಾ ಉದ್ಯು ಕ್ತರಾಗಿರುತ್ತಾರೆ. ಅಂತಹ ಶ್ರೀ ಉಪಾಧ್ಯಾಯರಿಗೆ ನಾನು ನಮಸ್ಕರಿಸು ವೆನು. ಇದು ಸಮವಾಯಾಂಗವೆಂಬ ನಾಲ್ಕನೇ ಅಂಗವು.

**ವ್ಯಾಖ್ಯಾಪ್ರಜ್ಞಪ್ತಿನಾಮಾನಂ ಯಃ ಪಠೇತ್ ಪಾಠಯೇತ್ ಪರಾನ್**
**ತಂ ಸ್ತುವೇಮಿ ಪದಾರ್ಥಸ್ಯ ಭೇದಾ ಭೇದಾದಿಸೂಚಕಂ ॥ ೧೩೪ ॥**

ಅರ್ಥ—ಯಾವ ಉಪಾಧ್ಯಾಯರು ಎಲ್ಲಾ ಪದಾರ್ಥಗಳ ಭೇದ ಪ್ರಭೇದಗಳನ್ನು ಸೂಚಿಸುವ ವ್ಯಾಖ್ಯಾಪ್ರಜ್ಞಪ್ತಿ ಎಂಬ ಅಂಗವನ್ನು ತಾನಾಗಿ ಓದುತ್ತಾರೆ, ಬೇರೆ ಮುನಿಗಳಿಗೆ ಓದಿಸುತ್ತಾರೆ. ಇಂತಹ ಉಪಾ ಧ್ಯಾಯಪರಮೇಷ್ಠಿಗಳಿಗೆ ನಮಸ್ಕಾರವು. ಇದು ವ್ಯಾಖ್ಯಾಪ್ರಜ್ಞಪ್ತಿ ಎಂಬ ಐದನೇ ಅಂಗವು.

**ಪಠನ್ ಜ್ಞಾತೃಕಥಾಂಗಂ ಯೋ ಜೀವಾಜೀವಾದಿಬೋಧಕಂ ॥**
**ಪಾಠಯಂಶ್ಚ ಪರಾನ್ನಿತ್ಯಂ ನಿಜೇ ತಿಷ್ಠತಿ ನೌಮಿ ತಂ ॥ ೧೩೫ ॥**

ಅರ್ಥ—ಶ್ರೀ ಉಪಾಧ್ಯಾಯರು ಜೀವ ಮತ್ತು ಅಜೀವ ಪದಾರ್ಥ ಗಳನ್ನು ಬೋಧಿಸುವ ಜ್ಞಾತೃಕಥಾವೆಂಬ ಅಂಗವನ್ನು ತಾನಾಗಿ ಓದು ವುದೂ ಬೇರೆ ಭವ್ಯರಿಗೆ ಓದಿಸುವುದೂ ಆಗಿದೆ. ಮತ್ತು ಸ್ವಾತ್ಮಚಿಂತನೆ ಯಲ್ಲಿ ನಿರತರಾಗಿರುತ್ತಾರೆ. ಅವರಿಗೆ ನನ್ನ ನಮಸ್ಕಾರವು. ಇದು ಜ್ಞಾತೃ ಕಥಾಂಗ ವೆಂಬ ಆರನೇ ಅಂಗವು.

**ಪಠೇನ್ನುಪಾಸಕಾಧ್ಯಾಯಂ ಶ್ರಾವಕಾಚಾರವಾಚಕಂ ॥**
**ಯೋಽನ್ಯಾಂಶ್ಚ ಪಾಠಯನ್ ದಕ್ಷಃ ಸ್ವಧರ್ಮೇ ನೌಮಿ ತಂ ಸದಾ॥**

ಅರ್ಥ—ಯಾವ ಉಪಾಧ್ಯಾಯರು ಶ್ರಾವಕಾಚಾರದ ವಿಷಯ ವನ್ನು ಹೇಳುವ ಉಪಾಸಕಾಧ್ಯಯನವೆಂಬ ಅಂಗವನ್ನು ಸ್ವಯಂ ಓದು ತ್ತಾರೆ. ಹಾಗೇನೇಯೇ ಬೇರೆ ಭವ್ಯರಿಗೆ ಓದಿಸುತ್ತಾರೆ. ಮತ್ತು ಆತ್ಮಸ್ವರೂಪದಲ್ಲಿ ದಕ್ಷರಾಗಿರುವರು. ಅಂತಹ ಉಪಾಧ್ಯಾಯರಿಗೆ ನನ್ನ ನಮಸ್ಕಾರವು. ಇದು ಉಪಾಸಕಾಧ್ಯಯನವೆಂಬ ಏಳನೇ ಅಂಗವು.

**ಅಂತಃಕೃದ್ದಶನಾಮಾಂಗಂ ಕೇವಲ್ಯಾಚಾರಬೋಧಕಂ ॥**
**ಪಠಂಶ್ಚ ಪಾಠಯನ್ನ್ಯೋಽನ್ಯಾನ್ ಮಗ್ನಃ ಸ್ವಾತ್ಮನಿ ನೌಮಿ ತಂ॥೧೩೭**

ಅರ್ಥ—ಒಬ್ಬೊಬ್ಬ ತೀರ್ಥಂಕರರ ಕಾಲದಲ್ಲಿ ಹತ್ತು-ಹತ್ತು ಅಂತ ಕೃತ್‌ಕೇವಲಿಗಳಾಗುತ್ತಾರೆ. ಅವರು ಅನೇಕಪ್ರಕಾರಗಳಾದ ಉಪಸರ್ಗಗಳನ್ನು ಸಹಿಸಿ ಅದೇ ಕಾಲದಲ್ಲಿ ಕೇವಲಜ್ಞಾನ ಮತ್ತು ಅದೇ ಕಾಲದಲ್ಲಿ ಮೋಕ್ಷವನ್ನು ಪಡೆಯುತ್ತಾರೆ. ಅವರ ವಿಸ್ತಾರವರ್ಣನೆಯು ಅಂತಕೃದ್ದಶವೆಂಬ ಎಂಟನೆಯ ಅಂಗದಲ್ಲಿ ಮಾಡಲ್ಪಟ್ಟಿದೆ. ತನ್ನ ನಿಜಾತ್ಮಸ್ವರೂಪದಲ್ಲಿ ಯಾವಾಗಲೂ ತಲ್ಲೀನರಾದ ಶ್ರೀ ಉಪಾಧ್ಯಾಯರು ಈ ಅಂಗವನ್ನು ಓದುತ್ತಾರೆ. ಮತ್ತು ಬೇರೆ ಮುನಿಗಳಿಗೆ ಓದಿಸುತ್ತಾರೆ. ಅಂತಹ ಉಪಾಧ್ಯಾಯಪರಮೇಷ್ಠಿಗಳಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಅಂತಕೃದ್ದಶಾಂಗವೆಂಬ ಎಂಟನೇ ಅಂಗವು.

**ಘೋರೋಪಸರ್ಗಜೇತೄಣಾಂ ಮುನೀನಾಂ ವೃತ್ತಬೋಧಕಂ ।**
**ಅನುತ್ತರೋಪಪಾದಾಂಗಂ ಪಠ್ಯತೇ ಯೇನ ಪಾಠ್ಯತೇ ॥ ೧೩೮ ॥**

ಅರ್ಥ—ಯಾವ ಮುನಿಗಳು ಘೋರಾತಿಘೋರ ಉಪಸರ್ಗಗಳನ್ನು ಜಯಿಸಿ ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿಗಳೆಂಬ ಅನುತ್ತರವಿಮಾನಗಳಲ್ಲಿ ಜನ್ಮತಾಳುತ್ತಾರೆ. ಅವರ ವರ್ಣನೆಯನ್ನು ಮಾಡಿದ ಅಂಗದ ಹೆಸರು ಅನುತ್ತರೋಪಪಾದದಶಾಂಗವೆಂಬುದು. ಈ ಅಂಗದ ಪಠನ-ಪಾಠನಗಳನ್ನು ಶ್ರೀ ಉಪಾಧ್ಯಾಯರು ಯಾವಾಗಲೂ ಮಾಡುತ್ತಾರೆ. ಅಂತಹ ಉಪಾಧ್ಯಾಯರಿಗೆ ನಾನು ನಮಸ್ಕರಿಸುತ್ತೇನೆ. ಇದು ಅನುತ್ತರೋಪಪಾದದಶಾಂಗವೆಂಬ ಒಂಭತ್ತನೆಯ ಅಂಗವು.

**ಪ್ರಶ್ನಾನಾಂ ಸುಖದುಃಖಾದೇಃ ಸೂಚಕಂ ಪಾಠಯನ್ ಪಠನ್ ।**
**ಪ್ರಶ್ನವ್ಯಾಕರಣಾಂಗಂ ಯಸ್ತೃಪ್ತಃ ಸ್ವಾತ್ಮನಿ ನೌಮಿ ತಂ ॥ ೧೩೯॥**

ಅರ್ಥ —ಶ್ರೀ ಉಪಾಧ್ಯಾಯಪರಮೇಷ್ಠಿಗಳು ಸುಖ—ದುಃಖ-ಜೀವನ-ಮರಣ-ಲಾಭ-ಅಲಾಭ ಮೊದಲಾದ ಪ್ರಶ್ನೋತ್ತರಗಳನ್ನು ಸೂಚಿಸುವ ಪ್ರಶ್ನವ್ಯಾಕರಣಾಂಗವೆಂಬ ಶಾಸ್ತ್ರವನ್ನು ಸ್ವಾಧ್ಯಾಯಮಾಡುತ್ತಾರೆ. ಮತ್ತು ಬೇರೆ ಮುನಿಗಳಿಗೆ ಓದಿಸುತ್ತಾರೆ. ಹಾಗೇನೆಯೆ ಅವರು ನಿಜಾತ್ಮದರ್ಶನದಲ್ಲಿ ತಲ್ಲೀನರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಪ್ರಶ್ನವ್ಯಾಕರಣವೆಂಬ ಹತ್ತನೆಯ ಅಂಗವು.

**ಪಠನ್ ವಿಪಾಕಸೂತ್ರಾಂಗಂ ದ್ರವ್ಯಭಾವಾದಿಕರ್ಮಣಾಂ |**
**ದ್ಯೋತಕಂ ಪಾಠಯನ್ ನಿತ್ಯಂ ನಿಜೇ ತೃಪ್ತೋಽಸ್ತಿ ನೌಮಿ ತಂ॥**

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ದ್ರವ್ಯಕರ್ಮ-ಭಾವಕರ್ಮಗಳ ಉದಯ-ಉಪಶಮ-ಕ್ಷಯ ಮತ್ತು ಉದೀರಣೆ ಮೊದಲಾದುವುಗಳನ್ನು ವರ್ಣಿಸಲ್ಪಟ್ಟ ವಿಪಾಕಸೂತ್ರವೆಂಬ ಅಂಗಶಾಸ್ತ್ರವನ್ನು ತಾನಾಗಿ ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ. ಹಾಗೇನೆಯೇ ಸ್ವಾನುಭವಾನಂದದಲ್ಲಿ ಯಾವಾಗಲೂ ಮಗ್ನರಾಗಿರುತ್ತಾರೆ. ಅಂತಹವರಿಗೆ ನಾನು ನಮಸ್ಕರಿಸುತ್ತೇನೆ. ಇದು ವಿಪಾಕಸೂತ್ರವೆಂಬ ಹನ್ನೊಂದನೆಯ ಅಂಗವು.

**ಏವಮೇಕಾದಶಾಂಗಂ ಯೋ ಸ್ವಸ್ವಭಾವಾದಿಬೋಧಕಂ |**
**ವ್ಯಾಧ್ಯಾದಿನಾಶಕಂ ಧತ್ತೇ ಸುಖಶಾಂತಿಪ್ರದಾಯಕಂ || ೧೪೧॥**

ಅರ್ಥ—ಮೇಲೆ ಬರೆದ ಹನ್ನೊಂದು ಅಂಗಗಳು ತನ್ನ ನಿಜಾತ್ಮಸ್ವಭಾವದ ತಿಳುವಳಿಕೆಯನ್ನು ಉಂಟುಮಾಡುವಂತಹುದು. ಆಧಿ-ವ್ಯಾಧಿ-ಉಪಾಧಿಗಳನ್ನು ನಿರ್ಮೂಲನಗೊಳಿಸುವುದು. ಮತ್ತು ಸುಖ-ಶಾಂತಿಗಳನ್ನು ಕೊಡುವಂತಹುದು. ಉಪಾಧ್ಯಾಯರು ಈ ಹನ್ನೊಂದು ಅಂಗಗಳನ್ನು ಧಾರಣೆ ಮಾಡಿದವರಾಗಿರುತ್ತಾರೆ. ತಾನಾಗಿ ಇವುಗಳನ್ನು ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ.

**ವರ್ಣ್ಯಂತೇಽಥ ಸುಭವ್ಯಾನಾಂ ಸ್ವಧರ್ಮಾದಿಪ್ರಬೋಧಕಾಃ |**
**ಚತುರ್ದಶ ಸುಪೂರ್ವಾಣಿ ಹಿ ಯಾಥಾತ್ಮ್ಯಸುಖದಾಯಕಾಃ ||೧೪೨||**

ಅರ್ಥ—ಮೇಲೆ ಬರೆದ ಹನ್ನೊಂದು ಅಂಗಗಳ ವರ್ಣನೆಯನ್ನು ಮಾಡಿದ ನಂತರ ಭವ್ಯಜೀವರುಗಳಿಗೆ ನಿಜಾತ್ಮಸ್ವರೂಪವನ್ನು ಪ್ರಬೋಧಿಸತಕ್ಕವುಗಳೂ ನಿಜವಾದ ಸುಖವನ್ನೀಯತಕ್ಕವುಗಳೂ ಆದ ೧೪ ಪೂರ್ವಗಳನ್ನು ವರ್ಣಿಸಲಾಗುತ್ತದೆ.

**ಪಠನ್ನುತ್ಪಾದಪೂರ್ವಂ ಯೋ ಧ್ರೌವ್ಯೋತ್ಪತ್ತ್ಯಾದಿಸೂಚಕಂ |**
**ಪಾಠಯನ್ ಹಿ ಪರಾನ್ನಿತ್ಯಂ ತುಷ್ಟಃ ಸ್ವಾತ್ಮನಿ ನೌಮಿ ತಂ ||೧೪೩||**

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ಜೀವ ಮತ್ತು ಅಜೀವ ಮೊದಲಾದ ನವಪದಾರ್ಥಗಳ ಉತ್ಪತ್ತಿ, ನಾಶ, ಮತ್ತು ಧ್ರುವತ್ವ

ಮೊದಲಾದ ಸ್ವಭಾವಗಳನ್ನು ಪ್ರಕಟಮಾಡುವ ಉತ್ಪಾದಪೂರ್ವ ಎಂಬ ಶಾಸ್ತ್ರವನ್ನು ತಾನು ಓದುತ್ತಾ, ಬೇರೆ ಮುನಿಗಳಿಗೆ ಓದಿಸುತ್ತಾರೆ. ತನ್ನ ಸ್ವಾತ್ಮಸುಖದಲ್ಲಿ ಸಂತುಷ್ಟರಾಗಿರುತ್ತಾರೆ. ಅವರಿಗೆ ನಮಸ್ಕಾರವು. ಉತ್ಪಾದಪೂರ್ವ ಎಂಬುದು ಮೊದಲಿನ ಪೂರ್ವವು.

**ಸದಾ ಯೋಽಗ್ರಾಯಣೀಪೂರ್ವಂ ಪ್ರಮಾಣನಯವಾಚಕಂ ।**
**ಪಠಂಶ್ಚ ಪಾಠಯನ್ ನೇತ್ತಿ ಸ್ವಾತ್ಮಾನಂ ನೌಮಿ ತಂ ಮುದಾ ೧೪೨**

ಅರ್ಥ—ಉಪಾಧ್ಯಾಯರು ಪ್ರಮಾಣ ಮತ್ತು ನಯಗಳ ಸ್ವರೂಪಗಳನ್ನು ಹೇಳತಕ್ಕ ಅಗ್ರಾಯಣೀ ಪೂರ್ವವೆಂಬ ಆಗಮಗ್ರಂಥವನ್ನು ಯಾವಾಗಲೂ ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ. ಹಾಗೇನೇ ನಿಜಾತ್ಮನಲ್ಲಿ ಲೀನರಾಗಿರುತ್ತಾರೆ. ಅವರಿಗೆ ಸಂತೋಷಪೂರ್ವಕ ನಮಸ್ಕಾರ ಮಾಡುತ್ತೇನೆ. ಇದು ಅಗ್ರಾಯಣೀಪೂರ್ವವೆಂಬ ೨ನೇ ಪೂರ್ವವು.

**ವೀರ್ಯಾನುವಾದಪೂರ್ವಂ ಯೋ ತೀರ್ಥಕೃದ್ವೀರ್ಯಸೂಚಕಂ॥**
**ಪಠಂಶ್ಚ ಪಾಠಯಂಶ್ಚಾನ್ಯಾನ್ ನೌಮಿ ತಂ ಸ್ವರಸೇ ರತಂ ॥ ೧೪೩ ॥**

ಅರ್ಥ—ಉಪಾಧ್ಯಾಯರು ಶ್ರೀ ತೀರ್ಥಂಕರರ ಬಲ ಮತ್ತು ಸಾಮರ್ಥ್ಯವನ್ನು ಸೂಚಿಸುವ ವೀರ್ಯಾನುವಾದಪೂರ್ವವನ್ನು ಸ್ವಯಂ ಸ್ವಾಧ್ಯಾಯಮಾಡುತ್ತಾರೆ. ಅನ್ಯ ಮುನಿಜನರಿಗೆ ಸ್ವಾಧ್ಯಾಯಮಾಡಿಸುತ್ತಾರೆ. ಆತ್ಮರಸದಲ್ಲಿ ಯಾವಾಗಲೂ ಮಗ್ನರಾಗಿರುತ್ತಾರೆ. ಅಂತಹ ಉಪಾಧ್ಯಾಯರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ವೀರ್ಯಾನುವಾದವೆಂಬ ಮೂರನೇ ಪೂರ್ವವು.

**ಯೋಽಸ್ತಿನಾಸ್ತಿಪ್ರವಾದಂ ಹಿ ಜೀವಾಜೀವಾದಿಗೋಚರಂ ।**
**ಪಠಂಶ್ಚ ಪಾಠಯಂಶ್ಚಾನ್ಯಾನ್ ದಕ್ಷಃ ಸ್ವಾತ್ಮನಿ ನೌಮಿ ತಂ ॥೧೪೪॥**

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ಜೀವಾದಿಪದಾರ್ಥಗಳ ಅಸ್ತಿತ್ವ ಹಾಗೆಯೇ ನಾಸ್ತಿತ್ವ ಮೊದಲಾದ ಸ್ವಭಾವಗಳನ್ನು ಹೇಳತಕ್ಕ ಅಸ್ತಿನಾಸ್ತಿಪ್ರವಾದವೆಂಬ ಪೂರ್ವವನ್ನು ಸ್ವಯಂ ಓದಿ ಅನ್ಯ ಮುನಿಗಳಿಗೆ ಓದಿಸುತ್ತಾರೆ. ತನ್ನ ನಿಜಾತ್ಮಸ್ವರೂಪವನ್ನು ತಿಳಿಯುವುದರಲ್ಲಿ ಅವರು ಪ್ರವೀಣರಾಗಿರುವರು. ಅವರನ್ನು ನಾನು ನಮಸ್ಕಾರ ಮಾಡುವೆನು. ಇದು ಅಸ್ತಿನಾಸ್ತಿಪ್ರವಾದವೆಂಬ ೪ ನೇ ಪೂರ್ವವು.

ಪಠನ್ ಜ್ಞಾನಪ್ರವಾದಂ ಹಿ ಜ್ಞಾನಾಜ್ಞಾನಾದಿಬೋಧಕಂ ।
ಪಠಾನ್ ಹಿ ಪಾಠಯನ್ನಿತ್ಯಂ ನಿಜೇ ತೃಪ್ತೋಽಸ್ತಿ ನೌಮಿ ತಂ॥೧೪೭

ಅರ್ಥ — ಉಪಾಧ್ಯಾಯರು ಜ್ಞಾನಸ್ವರೂಪ ಮತ್ತು ಅಜ್ಞಾನ ಸ್ವರೂಪಗಳನ್ನು ವಿಶದವಾಗಿ ಪ್ರಕಟ ಮಾಡುವ ಜ್ಞಾನಪ್ರವಾದವೆಂಬ ಪೂರ್ವವನ್ನು ತಾನಾಗಿ ಯಾವಾಗಲೂ ಓದುತ್ತಾರೆ. ಮತ್ತು ಬೇರೆ ಮುನೀಶ್ವರರಿಗೂ ಓದಿಸುತ್ತಾರೆ. ಅವರು ನಿಜಾತ್ಮಸ್ವರೂಪದಲ್ಲಿ ಆನಂದಿತರಾಗಿದ್ದಾರೆ. ಅವರಿಗೆ ನಮಸ್ಕರಿಸುವೆನು. ಇದು ಜ್ಞಾನಪ್ರವಾದವೆಂಬ ೫ ನೇ ಪೂರ್ವವು.

ಸತ್ಯಪ್ರವಾದಂ ಯೋ ಯೋಗೀ ದಶಧೋಕ್ತ್ಯಾದಿಬೋಧಕಂ ।
ಪಠಂಶ್ಚ ಪಾಠಯನ್ ತುಷ್ಟಃ ಸ್ವರಸೇ ನೌಮಿ ತಂ ಸದಾ ॥ ೧೪೮ ॥

ಅರ್ಥ — ಯಾವ ಉಪಾಧ್ಯಾಯರು ಹತ್ತು ಪ್ರಕಾರಗಳಾದ ಸತ್ಯವಚನವನ್ನು ಬೋಧಿಸತಕ್ಕ ಸತ್ಯಪ್ರವಾದವನ್ನು ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ. ಯಾವಾಗಲೂ ನಿಜಾತ್ಮಸುಖರಸದಲ್ಲಿ ಮಗ್ನರಾಗಿದ್ದಾರೆ. ಅಂತಹ ಉಪಾಧ್ಯಾಯರಿಗೆ ಸಂತೋಷದಿಂದ ನಮಸ್ಕರಿಸುವೆನು. ಇದು ಸತ್ಯಪ್ರವಾದವೆಂಬ ೬ ನೇ ಪೂರ್ವವು.

ಶ್ರದ್ಧಯಾತ್ಮಪ್ರವಾದಂ ಹಿ ಮೂರ್ತಾಮೂರ್ತಾದಿಬೋಧಕಂ ।
ಯಃ ಪಠನ್ ಪಾಠಯನ್ ಸ್ಥಾತುಂ ಸ್ತೌಮಿ ತಂ ಯತತೇ ನಿಜೇ ॥

ಅರ್ಥ — ಉಪಾಧ್ಯಾಯರು ಮೂರ್ತಿ ಮತ್ತು ಅಮೂರ್ತಿ [ ಸ್ಪರ್ಶ ರಸ, ಗಂಧ ಮತ್ತು ವರ್ಣಗಳಿರುವ ವಸ್ತುವಿಗೆ ಮೂರ್ತಿಎಂದೂ, ಅವಿಲ್ಲದಿರುವ ವಸ್ತುವಿಗೆ ಅಮೂರ್ತಿ ಎಂದೂ ಹೇಳಲಾಗುತ್ತದೆ. ] ಮೊದಲಾದ ಧರ್ಮಗಳನ್ನು ಬೋಧಿಸತಕ್ಕ ಆತ್ಮಪ್ರವಾದವೆಂಬ ಪೂರ್ವವನ್ನು ತಾನು ಸ್ವಾಧ್ಯಾಯ ಮಾಡುತ್ತಾರೆ. ಬೇರೆ ಮುನಿಗಳಿಗೆ ಮಾಡಿಸುತ್ತಾರೆ. ಹಾಗೇನೆಯೇ ಯಾವಾಗಲೂ ನಿಜಾತ್ಮನಲ್ಲಿ ಸ್ಥಿರವಾಗಿರಲು ಪ್ರಯತ್ನಿಸುತ್ತಾರೆ. ಅಂತಹ ಉಪಾಧ್ಯಾಯರಿಗೆ ನಾನು ನಮಸ್ಕರಿಸುವೆನು. ಇದು ಆತ್ಮಪ್ರವಾದವೆಂಬ ೭ ನೇ ಪೂರ್ವವು.

ಕರ್ಮಬಂಧೋದಯಾದೀನಾಂ ದ್ಯೋತಕಂ ಪಾಠಯನ್ ಪಠನ್ ।
ಕರ್ಮಪ್ರವಾದಂ ಸಕಲಂ ದಕ್ಷಃ ಸ್ವಾತ್ಮನಿ ನೌಮಿ ತಂ ॥ ೧೫೦ ॥

ಅರ್ಥ—ಉಪಾಧ್ಯಾಯರು ಎಂಟು ವಿಧಗಳಾದ ಕರ್ಮಗಳ ಬಂಧ ಅಥವಾ ಅವುಗಳ ಉದಯ ಮೊದಲಾದುವುಗಳನ್ನು ಪ್ರಕಟಿಸುವ ಎಲ್ಲಾ ಕರ್ಮಪ್ರವಾದವೆಂಬ ಪೂರ್ವವನ್ನು ತಾನು ಓದಿಯೂ ಇತರ ಮುನಿಗಳಿಗೆ ಓದಿಸುತ್ತಲೂ ಇರುತ್ತಾರೆ. ತನ್ನ ನಿಜಾತ್ಮಸ್ವರೂಪವನ್ನು ತಿಳಿಯುವುದರಲ್ಲಿ ಪ್ರವೀಣರಾಗಿರುವರು. ಅಂತವರಿಗೆ ನಾನು ನಮಸ್ಕರಿಸುವೆನು. ಇದು ಕರ್ಮಪ್ರವಾದವೆಂಬ ೮ ನೆಯ ಪೂರ್ವವು.

ಪ್ರತ್ಯಾಖ್ಯಾನಪ್ರವಾದಂ ಯೋ ವ್ರತಸಂಖ್ಯಾನಬೋಧಕಂ ।
ಪಠಂಶ್ಚ ಪಾಠಯಲ್ಲೀನಃ ಸ್ವಪದೇ ನೌಮಿ ತಂ ಮುದಾ ॥೧೫೧॥

ಅರ್ಥ—ಉಪಾಧ್ಯಾಯರು ವ್ರತಗಳ ಸಂಖ್ಯೆಯನ್ನು ಅಥವಾ ಅವುಗಳ ವಿಧಿವಿಧಾನಗಳನ್ನು ಪ್ರತಿಪಾದಿಸುವ ಪ್ರತ್ಯಾಖ್ಯಾನಪ್ರವಾದವೆಂಬ ಪೂರ್ವವನ್ನು ಸ್ವಯಂ ಓದುತ್ತಾರೆ. ಹಾಗೇನೆಯೇ ಬೇರೆ ಮುನಿಗಳಿಗೆ ಓದಿಸುತ್ತಾರೆ. ತನ್ನ ವಿಶುದ್ಧಾತ್ಮನಲ್ಲಿ ಲೀನರಾಗಿರುತ್ತಾರೆ. ಅವರಿಗೆ ನಾನು ನಮಸ್ಕರಿಸುವೆನು. ಇದು ಪ್ರತ್ಯಾಖ್ಯಾನವೆಂಬ ೯ ನೇ ಪೂರ್ವವು.

ಪಠಲ್ಲಘುಮಹಾವಿದ್ಯಾಬೋಧಕಂ ಪಾಠಯನ್ ಪರಾನ್ ।
ನಿತ್ಯಂ ವಿದ್ಯಾನುವಾದಂ ಯೋ ಸ್ವಾತ್ಮಾನಂ ವೇತ್ತಿ ನೌಮಿ ತಂ ॥

ಅರ್ಥ-ಉಪಾಧ್ಯಾಯರು ೭೦೦ ಪ್ರಕಾರಗಳಾದ ಅಲ್ಪವಿದ್ಯೆಗಳನ್ನು ಮತ್ತು ೫೦೦ ಬಗೆಯ ಮಹಾವಿದ್ಯೆಗಳನ್ನೂ ಪ್ರಕಟಿಪಡಿಸುವ ವಿದ್ಯಾನುವಾದವೆಂಬ ಪೂರ್ವವನ್ನು ಯಾವಾಗಲೂ ತಾನಾಗಿ ಓದುತಾರೆ. ಹಾಗೇನೆಯೇ ಬೇರೆ ಮುನಿಗಳಿಗೆ ಓದಿಸುತ್ತಾರೆ. ಇವರು ನಿಜಾತ್ಮನನ್ನು ಸ್ಪಷ್ಟವಾಗಿ ತಿಳಿಯುತ್ತಾರೆ. ಅವರಿಗೆ ನಾನು ನಮಸ್ಕರಿಸುವೆನು. ಇದು ವಿದ್ಯಾನುವಾದವೆಂಬ ೧೦ ನೇ ಪೂರ್ವವು.

ಯೋಽಸ್ಮಾನ್ ಕಲ್ಯಾಣವಾದಂ ವೈ ಅರ್ಹದ್ಗರ್ಭಾದಿಬೋಧಕಂ ।
ಪಠನ್ ವಾ ಪಾಠಯನ್ ಭಾವೇ ಶುದ್ಧೇ ಲಿನೋಽಸ್ತಿ ನೌಮಿ ತಂ ॥

ಅರ್ಥ—ಯಾವ ಉಪಾಧ್ಯಾಯಪರಮೇಷ್ಠಿಗಳು ಶ್ರೀ ಅರಹಂತಪರಮೇಷ್ಠಿಗಳ ಗರ್ಭ, ಜನ್ಮ, ತಪ, ಕೇವಲ ಮತ್ತು ನಿರ್ವಾಣಗಳೆಂಬ ಐದು ಕಲ್ಯಾಣಗಳನ್ನು ಉಪದೇಶ ಮಾಡುವ ಕಲ್ಯಾಣವಾದ ಪೂರ್ವವನ್ನು ತಾನಾಗಿ ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ. ಹಾಗೇನೆಯೇ

ಶುದ್ಧಾತ್ಮನಲ್ಲಿ ಲೀನರಾಗಿರುತ್ತಾರೆ. ಅಂತಹ ಉಪಾಧ್ಯಾಯರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಕಲ್ಯಾಣವಾದವೆಂಬ ೧೧ ನೇ ಪೂರ್ವವು.

ಪ್ರಾಣಾವಾಯಂ ಪಠನ್ ಯೋನ್ಯಾನ್ ಮಂತ್ರವಾದಾದಿಗೋಚರಂ ।
ಪಾಠಯನ್ ಲಭತೇ ನಿತ್ಯಂ ಸ್ವಸ್ವಾದಂ ನೌಮಿ ತಂ ಸದಾ ॥೧೫೪॥

ಅರ್ಥ—ಉಪಾಧ್ಯಾಯರು ಮಂತ್ರ ತಂತ್ರಾದಿಗಳ ವಿಷಯವನ್ನು ಬೋಧಿಸತಕ್ಕ ಪ್ರಾಣಾವಾಯುವೆಂಬ ಪೂರ್ವವನ್ನು ಸ್ವಯಂ ಸ್ವಾಧ್ಯಾಯ ಮಾಡುತ್ತಾರೆ. ಬೇರೆ ಮುನಿಗಳಿಗೆ ಸ್ವಾಧ್ಯಾಯ ಮಾಡಿಸುತ್ತಾರೆ. ಮತ್ತು ಯಾವಾಗಲೂ ನಿಜಾತ್ಮರಸಾನುಭವವನ್ನು ಅನುಭವಿಸುತ್ತಾರೆ. ಅಂತಹ ಉಪಾಧ್ಯಾಯರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಪ್ರಾಣಾವಾಯವೆಂಬ ೧೨ ನೆಯ ಪೂರ್ವವು.

ಪಠನ್ ಕ್ರಿಯಾವಿಶಾಲಂ ಯೋ ಕಲಾಛಂದಃಪ್ರಬೋಧಕಂ ।
ಪಾಠಯಂಶ್ಚ ಸದಾನ್ಯಾನ್ ಹಿ ನಿಜೇ ತುಷ್ಟೋಽಸ್ತಿ ನೌಮಿ ತಂ ॥

ಅರ್ಥ—ಯಾವ ಉಪಾಧ್ಯಾಯರು ೬೪ ಕಲೆಗಳನ್ನೂ ಅನೇಕ ಪ್ರಕಾರಗಳಾದ ಛಂದಃ ಶಾಸ್ತ್ರಗಳನ್ನೂ ಪ್ರತಿಪಾದನೆಮಾಡುವ ಕ್ರಿಯಾ ವಿಶಾಲವೆಂಬ ಪೂರ್ವವನ್ನು ತಾನಾಗಿ ಓದಿಯೂ ಅನ್ಯರಿಗೆ ಓದಿಸುತ್ತಾ ಇದ್ದು ನಿಜಾತ್ಮನಲ್ಲಿ ನಿಶ್ಚಯವಾಗಿಯೂ ಸಂತೋಷಗೊಂಡವರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಕ್ರಿಯಾವಿಶಾಲವೆಂಬ ೧೩ ನೆಯ ಪೂರ್ವವು.

ಯೋ ಲೋಕಬಿಂದುಸಾರಂ ಹಿ ಮೋಕ್ಷಸೌಖ್ಯಾದಿಸೂಚಕಂ ।
ಪಠನ್ ವಾ ಪಾಠಯನ್ನಿತ್ಯಂ ಲೀನಃ ಸ್ವಾತ್ಮನಿ ನೌಮಿ ತಂ ॥೧೫೬॥

ಅರ್ಥ-ಯಾವ ಉಪಾಧ್ಯಾಯಪರಮೇಷ್ಠಿಗಳು ಮೋಕ್ಷಸೌಖ್ಯವನ್ನೂ ಅದರ ಸ್ವರೂಪ ಮೊದಲಾದವುಗಳನ್ನೂ ಬೋಧಿಸುವ ಲೋಕಬಿಂದು ಸಾರಶಾಸ್ತ್ರವನ್ನು ಓದುತ್ತಾರೆ. ಬೇರೆ ಮುನಿಗಳಿಗೆ ಓದಿಸುತ್ತಾರೆ. ಯಾವಾಗಲೂ ನಿಜಾತ್ಮಾನುಭವದಲ್ಲಿ ಮಗ್ನರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುವೆನು. ಇದು ಲೋಕಬಿಂದುಸಾರವೆಂಬ ೧೪ ನೇ ಪೂರ್ವವು.

ವೈ ಚತುರ್ದಶಪೂರ್ವಾಣಿ ಗದಿತಾನೀತಿಭಕ್ತಿತಃ।
ಮಯಾ ಸ್ವರ್ಮೋಕ್ಷಮೂಲಾನಿ ಸಂಸಾರಧ್ವಂಸಕಾನಿ ಹಿ ॥ ೧೫೭ ॥

ಅರ್ಥ—ಈ ಪ್ರಕಾರ ನಾನು ಭಕ್ತಿಪೂರ್ವಕ ೧೪ ಪೂರ್ವಶಾಸ್ತ್ರಗಳ ಸ್ವರೂಪವನ್ನು ಹೇಳಿರುವೆನು. ಇವು ಸ್ವರ್ಗ-ಮೋಕ್ಷಗಳ ಸುಖವನ್ನು ಕೊಡುವಂತವುಗಳು. ಮತ್ತು ಜನ್ಮ-ಜರಾ-ಮರಣರೂಪಿಯಾದ ಸಂಸಾರವನ್ನು ನಾಶಮಾಡುವಂತವುಗಳು.

ಏವಂ ಸಮುದಿತಾಃ ಸರ್ವೇ ಪಂಚವಿಂಶತಿಸಂಖ್ಯಕಾಃ।
ಉಪಾಧ್ಯಾಯಗುರೋರುಕ್ತಾ ಹೃದ್ಯಾ ದುಃಖಹರಾ ಗುಣಾಃ ॥ ೫೮

ಅರ್ಥ—ಈ ರೀತಿಯಾಗಿ ನಾನು ಹನ್ನೊಂದು ಅಂಗಗಳನ್ನೂ ೧೪ ಪೂರ್ವಗಳನ್ನೂ ಸೇರಿಸಿ ಉಪಾಧ್ಯಾಯಪರಮೇಷ್ಠಿಗಳ ೨೫ ಗುಣಗಳನ್ನು ಹೇಳಿರುವೆನು. ಇವು ಮನೋಹರವಾಗಿಯೂ, ದುಃಖಗಳನ್ನು ನಾಶಮಾಡತಕ್ಕವುಗಳಾಗಿಯೂ ಇವೆ.

## ಸರ್ವಸಾಧುಗಳ ಗುಣ.

ಸ್ವರ್ಮೋಕ್ಷದಾ ಗುಣಾಃ ನೂನಮಷ್ಟಾವಿಂಶತಿಸಂಖ್ಯಕಾಃ ।
ಸಾಧೋರ್ದುಃಖಹರಾ ಹೃದ್ಯಾ ವರ್ಣ್ಯಂತೇ ಹಿ ಸುಖಪ್ರದಾಃ ॥

ಅರ್ಥ—ಇನ್ನು ಮುಂದೆ ಸರ್ವಸಾಧುಗಳ ೨೮ ಗುಣಗಳನ್ನು ವರ್ಣನೆ ಮಾಡುತ್ತೇನೆ. ಅವುಗಳಿಂದ ಸ್ವರ್ಗ-ಮೋಕ್ಷಗಳುಂಟಾಗುತ್ತವೆ. ದುಃಖ ದೂರವಾಗುತ್ತದೆ. ಅವುಗಳು ಮನೋಹರವಾಗಿಯೂ ಸುಖವನ್ನುಂಟುಮಾಡತಕ್ಕವುಗಳಾಗಿಯೂ ಇವೆ.

ತ್ರಸಸ್ಥಾವರಜೀವಾನ್ ಯೋ ಜೀವಸ್ಥಾನಾದಿಷು ಸ್ಥಿತಾನ್ ।
ಜ್ಞಾತ್ವಾ ನಿಜಾತ್ಮವದ್ರಕ್ಷನ್ ಮಗ್ನಃ ಸ್ವಾತ್ಮನಿ ನೌಮಿ ತಂ ॥೧೬೦॥

ಅರ್ಥ—ಯಾವ ಸರ್ವಸಾಧುಪರಮೇಷ್ಠಿಗಳು ೧೪ ಬಗೆಯ ಜೀವಸಮಾಸಗಳಲ್ಲಿರುವ ಎಲ್ಲಾ ತ್ರಸ ಮತ್ತು ಸ್ಥಾವರಜೀವಗಳನ್ನು ತನ್ನ ಆತ್ಮನಿಗೆ ಸಮಾನವಾದವುಗಳೆಂದು ತಿಳಿದು ಅವುಗಳ ರಕ್ಷಣೆಯನ್ನು ಮಾಡುತ್ತಾರೆ. ಅವರು ನಿಜಾತ್ಮನಲ್ಲಿ ತಲ್ಲೀನರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಅಹಿಂಸಾಮಹಾವ್ರತವೆಂಬ ಮೊದಲನೇ ಮಹಾವ್ರತವು.

**ವಚೋಽಪ್ರಿಯಾನೃತಂ ತ್ಯಕ್ತ್ವಾ ಕ್ಲೇಶವೈರಾದಿವರ್ಧಕಂ |**
**ಹಿತಂ ಮಿತಂ ಪ್ರಿಯಂ ಸತ್ಯಂ ಬ್ರುವನ್ ಸ್ವಂ ವೇತ್ತಿ ನೌಮಿ ತಂ ||**

ಅರ್ಥ—ಯಾವ ಸಾಧುಗಳು ಕ್ಲೇಶವನ್ನೂ, ವೈರವನ್ನೂ ಹೆಚ್ಚಿಸ ತಕ್ಕ ಅಪ್ರಿಯವಾಗಿಯೂ ಮತ್ತು ಸುಳ್ಳಾಗಿಯೂ ಇರುವ ಮಾತನ್ನು ತೊರೆದು, ಎಲ್ಲಾ ಜೀವಗಳಿಗೂ ಹಿತವನ್ನು ಬಯಸುವ, ಪ್ರಿಯವಾಗಿರುವ ಪರಿಮಿತವಾದ ಸತ್ಯವಚನವನ್ನೇ ಯಾವಾಗಲೂ ಆಡುತ್ತಾರೆ. ನಿಜಾತ್ಮ ಸ್ವರೂಪವನ್ನು ಚೆನ್ನಾಗಿ ಅರಿತವರಾಗಿರುತ್ತಾರೆ. ಅವರಿಗೆ ನಾನು ನಮ ಸ್ಕಾರ ಮಾಡುತ್ತೇನೆ. ಇದು ೨ನೆಯ ಸತ್ಯ ಮಹಾವ್ರತವು.

**ವಿಸ್ಮೃತಂ ಪತಿತಂ ದ್ರವ್ಯಂ ಪರಗ್ರಾಮವನಾದಿಷು |**
**ತ್ಯಕ್ತ್ವಾಽದತ್ತಂ ಸ್ವಬಾಹ್ಯಂ ಹಿ ಯಸ್ತೃಪ್ತಃ ಸ್ವಾತ್ಮನಿ ನೌಮಿ ತಂ||**

ಅರ್ಥ—ಯಾವ ಸಾಧುಗಳು ಯಾವುದಾದರೊಂದು ಗ್ರಾಮದಲ್ಲಿ ಯಾಗಲೀ ನಗರದಲ್ಲಿಯಾಗಲೀ ಅಥವಾ ವನದಲ್ಲಿಯಾಗಲೀ ಮರೆತು ಹೋದ ಅಥವಾ ಬಿದ್ದ ಒಡವೆ ವಸ್ತುಗಳನ್ನೂ, ದುಡ್ಡು ದುಗಾಣಿಗಳನ್ನೂ ತೆಗೆದುಕೊಳ್ಳುವದಿಲ್ಲ. ತನ್ನ ನಿಜಾತ್ಮನಿಂದ ಬೇರೆಯಾಗಿರುವ ಯಾವು ದೊಂದು ವಸ್ತುವನ್ನೂ ಕೊಡದೆ ಗ್ರಹಣೆಮಾಡುವುದಿಲ್ಲ. ಅಂದರೆ ಸ್ಥೂಲ ಸೂಕ್ಷ್ಮರೂಪವಾದ ಕಳ್ಳಾಟಿಕೆಯನ್ನು ಮಾಡುವದಿಲ್ಲ. ಯಾವಾಗಲೂ ನಿಜಾತ್ಮಾನಂದದಲ್ಲಿಯೇ ಸಂತೋಷಚಿತ್ತರಾಗಿರುತ್ತಾರೆ. ಅಂತಹವರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಅಚೌರ್ಯವೆಂಬ ೩ ನೇ ಮಹಾ ವ್ರತವು.

**ಸ್ತ್ರೀ ಮಾತ್ರಂ ಮೋಕ್ಷಹೇತೋರ್ಯಸ್ತ್ಯಕ್ತ್ವಾ ನಿಜಂ ಸ್ಮರನ್ |**
**ಸ್ವಾತ್ಮನ್ಯೇವ ಸದಾ ತುಷ್ಟೋ ನೌಮಿ ತಂ ಸ್ವಾತ್ಮಸಾಧಕಂ ||೧೬೩||**

ಅರ್ಥ—ಯಾವ ಸಾಧುಪರಮೇಷ್ಠಿಗಳು ಮುಕ್ತಿಲಕ್ಷ್ಮಿಯನ್ನು ಪಡೆ ಯಲು ಸ್ತ್ರೀ ಮಾತ್ರರಾದವರನ್ನು ತೊರೆದು ಬಿಟ್ಟು ನಿಜಾತ್ಮತತ್ವಚಿಂತನೆ ಯನ್ನು ಯಾವಾಗಲೂ ಸ್ಮರಿಸುತ್ತಿರುತ್ತಾರೆ. ಮತ್ತು ಆತ್ಮವಿಶುದ್ಧಸ್ವರೂ ಪವನ್ನೇ ಸಿದ್ಧಮಾಡಿಕೊಂಡಿರುತ್ತಾರೆ. ನಿಜಾತ್ಮನಲ್ಲಿಯೇ ಸಂತುಷ್ಟರಾಗಿ ರುತ್ತಾರೆ. ಅಂತಹ ಸಾಧುಗಳಿಗೆ ನಾನು ಯಾವಾಗಲೂ ನಮಸ್ಕಾರ ಮಾ ಡುತ್ತೇನೆ. ಇದು ಬ್ರಹ್ಮಚರ್ಯವೆಂಬ ೪ ನೇ ಮಹಾವ್ರತವು.

**ಯಸ್ತ್ಯಕ್ತ್ವಾಂತರ್ಬಹಿಃಸಂಗಂ ಪರವಸ್ತುವಿನಿರ್ಮಮಃ ।**
**ತುಷ್ಟಃ ಸ್ವಾತ್ಮನಿ ವಂದೇ ತಂ ನಿಜಾತ್ಮರಸಿಕಂ ಮುನಿಂ ॥ ೧೬೪ ॥**

ಅರ್ಥ— ಯಾವ ಸಾಧುಪರಮೇಷ್ಠಿಗಳು ತನ್ನಿಂದ ಬೇರೆಯಾದ ಪದಾರ್ಥಗಳ ಮೇಲಿನ ಮಮತ್ವವನ್ನು ಬಿಟ್ಟು ೧೪ ಪ್ರಕಾರದ ಅಂತರಂಗ ಮತ್ತು ೧೦ ಪ್ರಕಾರಗಳಾದ ಬಹಿರಂಗಪರಿಗ್ರಹಗಳನ್ನು ತೊರೆದವರಾಗಿರುತ್ತಾರೆ. ನಿಜಾತ್ಮನಲ್ಲಿ ಯಾವಾಗಲೂ ಸಂತೋಷಭರಿತರಾಗಿರುತ್ತಾರೆ. ಅಂತಹವರಿಗೆ ನಾನು ನಿರಂತರ ನಮಸ್ಕಾರಮಾಡುತ್ತೇನೆ. ಇದು ಪರಿಗ್ರಹತ್ಯಾಗವೆಂಬ ೫ ನೇ ಮಹಾವ್ರತವು.

**ಮಹಾವ್ರತಾನಾಂ ಪಂಚಾನಾಂ ಸ್ವರೂಪಂ ಕಥಿತಂ ಮುನೇಃ ।**
**ದುಃಖಹರ್ತುಃ ಕ್ಷಮಾಸಿಂಧೋರ್ಭವಕ್ಲೇಶವಿನಾಶಿನಃ ॥ ೧೬೫ ॥**

ಅರ್ಥ— ಯಾವ ಸಾಧುಗಳು ಸಂಸಾರದ ಸಮಸ್ತ ದುಃಖಗಳನ್ನು ನಾಶಮಾಡುವವರಾಗಿಯೂ, ಕ್ಷಮೆಯೆಂಬ ಗುಣಕ್ಕೆ ಸಮುದ್ರದಂತಿರುವವರಾಗಿಯೂ, ಸಂಸಾರದ ಎಲ್ಲಾ ಬಗೆಯ ಕ್ಲೇಶಗಳನ್ನು ದೂರಮಾಡುವವರಾಗಿಯೂ ಆಗಿರುತ್ತಾರೆ. ಅಂತಹ ಮುನಿವರ್ಯರು ಧಾರಣೆಮಾಡುವ ಮಹಾವ್ರತಗಳಸ್ವರೂಪವನ್ನು ನಾನು ವರ್ಣನೆ ಮಾಡಿದೆನು.

**ವರ್ಣ್ಯಂತೇ ಸಮಿತೇಃ ಪಂಚ ಭೇದಾಃ ಸುಖಕರಾಃ ಸದಾ ।**
**ಸ್ವರ್ಮೋಕ್ಷದಾಯಕಾಃ ಪಾಪರೋಧಕಾಃ ಕ್ಲೇಶನಾಶಕಾಃ ॥ ೧೬೬ ॥**

ಅರ್ಥ— ಈಗ ಮುನಿಗಳ ಐದು ಸಮಿತಿಗಳ ವರ್ಣನೆಯು ಮಾಡಲಾಗುತ್ತದೆ. ಈ ಸಮಿತಿಗಳ ಪಾಲನೆಯಿಂದ ಸಂಸಾರದ ಸಂಕ್ಲೇಶಗಳು ದೂರವಾಗುತ್ತವೆ. ಅಶುಭಕರ್ಮಗಳು ನಾಶವಾಗುತ್ತವೆ. ಸುಖವುಂಟಾಗುತ್ತದೆ. ಮತ್ತು ಸ್ವರ್ಗಮೋಕ್ಷಗಳು ಪ್ರಾಪ್ತಿಯಾಗುತ್ತವೆ.

**ಚತುರ್ಹಸ್ತಪ್ರಮಾಣಂ ಯೋ ಮಾರ್ಗಂ ಪಶ್ಯನ್ ದಿನೇ ಸದಾ ।**
**ಈರ್ಯಾಸಮಿತ್ಯಾ ಧರ್ಮಾರ್ಥಂ ಯತ್ನಾದ್ಗಚ್ಛತಿ ನೌಮಿ ತಂ ॥**

ಅರ್ಥ— ಯಾವ ಸಾಧುವು ದಿವಸದಲ್ಲಿ ನಾಲ್ಕು ಮೊಳದವರೆಗೆ ಭೂಮಿಯನ್ನು ನೋಡಿ ಧರ್ಮಕಾರ್ಯಕ್ಕಾಗಿ ಯತ್ನಪೂರ್ವಕವಾಗಿ ಗಮನಮಾಡುತ್ತಾನೆಯೋ ಅದಕ್ಕೆ ಈರ್ಯಾಸಮಿತಿಯೆಂದು ಹೆಸರು.

ಅಂತಹ ಸಾಧುವಿಗೆ ನಾನು ನಮಸ್ಕರಿಸುವೆನು. ಇದು ಮೊದಲನೇ ಈರ್ಯಾಸಮಿತಿಯು.

**ಪರನಿಂದಾದಿಯುಕ್ತಾಂ ಯೋ ಮಾಯಾಂ ದಶವಿಧಾಂ ತ್ಯಜನ್ ।**
**ವಾಚಂ ಯೋ ಹಿತದಾಂ ಮಿಷ್ಟಾಂ ವದನ್ ಸ್ವಂ ವೇತ್ತಿ ನೌಮಿ ತಂ॥**

ಅರ್ಥ—ಯಾವ ಸಾಧುಗಳು ಬೇರೆಯವರ ನಿಂದೆ ಮತ್ತು ಕಟು ಕತೆಯಿಂದ ಕೂಡಿದ ಹತ್ತು ಪ್ರಕಾರಗಳಾದ ನಿಂದನೀಯ ವಚನಗಳನ್ನು ಆಡುವುದಿಲ್ಲವೋ, ಅವರ ಬದಲಿಗೆ ತನಗೆ ಮತ್ತು ಇತರ ಜೀವಗಳಿಗೆ ಹಿತವನ್ನುಂಟುಮಾಡುವ ಮತ್ತು ಮಧುರವಾದ ಮಾತುಗಳನ್ನಾಡುತ್ತಾರೆಯೋ, ಹಾಗೇನೆಯೇ ನಿಜಾತ್ಮಸ್ವರೂಪವನ್ನು ಚೆನ್ನಾಗಿ ಅರಿಯುತ್ತಾರೆಯೋ ಅಂತಹ ಸಾಧುಗಳಿಗೆ ನಾನು ನಮಸ್ಕರಿಸುವೆನು. ಇದು ಎರಡನೇ ಭಾಷಾಸಮಿತಿಯು.

**ದೋಷಾಂತರಾಯನಿರ್ಮುಕ್ತಂ ಶ್ರಾವಕೈಃ ಶುದ್ಧಮರ್ಪಿತಂ ।**
**ಅನ್ನಂ ಭುಂಜನ್ ಸದಾ ಲೀನೋ ನಿಜಾತ್ಮನಿ ನಮಾಮಿ ತಂ ॥೧೬॥**

ಅರ್ಥ—ಯಾವ ಸಾಧುಗಳು ೪೬ ದೋಷಗಳಿಂದ ರಹಿತವಾದ ಮತ್ತು ೩೨ ಅಂತರಾಯಗಳಿಂದ ದೂರವಾದ ಹಾಗೇನೆಯೇ ಶ್ರಾವಕರುಗಳಿಂದ ಕೊಡಲ್ಪಟ್ಟ ಶುದ್ಧ ಭೋಜನ-ಆಹಾರವನ್ನು ಗ್ರಹಣ ಮಾಡುತ್ತಾರೋ ತಥಾ ತನ್ನ ಶುದ್ಧಾತ್ಮನಲ್ಲಿ ಲೀನರಾಗಿರುತ್ತಾರೋ ಅಂತಹ ಸಾಧುಗಳಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಮೂರನೇ ಏಷಣಾ ಸಮಿತಿಯು.

**ಜ್ಞಾನಸಂಯಮಪಾತ್ರಾಣಿ ಯೋ ಗೃಹ್ಣಾತಿ ವಿಸರ್ಜತಿ ।**
**ಪ್ರವರ್ತತೇ ಸದಾ ಸಮ್ಯಕ್ ಸಮಿತ್ಯಾ ನೌಮಿ ತಂ ಮುದಾ ॥೧೭॥**

ಯಾವ ಸಾಧುಗಳು ಜ್ಞಾನ ಮತ್ತು ಸಂಯಮಗಳನ್ನು ಹೆಚ್ಚಿಸುವುದಕ್ಕೆ ಕಾರಣಭೂತಗಳಾದ ಶಾಸ್ತ್ರ ಮತ್ತು ಪಿಂಛಿ, ಕಮಂಡಲ ಮೊದಲಾದುವುಗಳನ್ನು ನೋಡಿ ಶೋಧಿಸಿ ತೆಗೆದುಕೊಳ್ಳುತ್ತಾರೆ, ಮತ್ತು ಇಡುತ್ತಾರೆ. ಹಾಗೇನೆಯೇ ಸಮಿತಿಪೂರ್ವಕವಾಗಿಯೇ ತನ್ನ ಎಲ್ಲಾ ಕ್ರಿಯೆಗಳನ್ನು ಯಾವಾಗಲೂ ಮಾಡುತ್ತಾರೆ, ಅಂತಹ ಸಾಧುಗಳಿಗೆ ಯಾವಾ

ಗಲೂ ಸಂತೋಷದಿಂದ ನಮಸ್ಕಾರ ಮಾಡುತ್ತೇನೆ. ಇದು ೪ನೇ ಆದಾನ ನಿಕ್ಷೇಪಣಾ ಸಮಿತಿಯು.

**ಸ್ಥಾನೇಽಚಿತ್ತೇ ವಿಶಾಲೇ ಹಿ ಮಲಮೂತ್ರವಿಸರ್ಜನಂ ।**
**ಕುರ್ವನ್ ಯೋ ಭವನಾಶಂ ಚ ಸ್ವಪದೇ ನೌಮಿ ತಂ ಸ್ಥಿರಂ ॥**

ಅರ್ಥ—ಯಾವ ಸಾಧುಗಳು ಜೀವಜಂತುಗಳಿಂದ ರಹಿತವಾದ ವಿಶಾಲ ಸ್ಥಾನದಲ್ಲಿ ಮಲಮೂತ್ರಗಳನ್ನು ವಿಸರ್ಜನೆ ಮಾಡುತ್ತಾರೋ, ಹಾಗೇನೆಯೇ ತನ್ನ ಜನ್ಮಮರಣರೂಪವಾದ ಸಂಸಾರವನ್ನು ನಾಶಮಾಡುವುದರಲ್ಲಿ ನಿರತರಾಗಿರುವರೋ, ಏವಂ ತನ್ನ ಪರಿಶುದ್ಧವಾದ ನಿಜಾತ್ಮನಲ್ಲಿ ನಿರಂತರ ತಲ್ಲೀನರಾಗಿರುತ್ತಾರೋ ಅಂತಹ ಸಾಧುಗಳಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ■ ನೇ ವ್ಯುತ್ಸರ್ಗಸಮಿತಿಯು.

**ಸ್ವರ್ಮೋಕ್ಷದಾಯಕಸ್ಯೇತಿ ಸಂಸಾರಕ್ಷಯಕಾರಿಕಾಃ ।**
**ಪ್ರೋಕ್ತಾಃ ಸಮಿತಯಃ ಪಂಚ ಸಾಧೋಃ ಸರ್ವಹಿತಂಕರಾಃ ॥೧೭೨॥**

ಅರ್ಥ—ಸ್ವರ್ಗ-ಮೋಕ್ಷವನ್ನು ಕೊಡುವ ಸಾಧುಗಳು ಆಚರಿಸುವ ೫ ಸಮಿತಿಗಳ ವರ್ಣನೆಯನ್ನು ನಾನು ಮಾಡಿದೆನು. ಇವು ಸಂಸಾರವನ್ನು ನಾಶಮಾಡತಕ್ಕವುಗಳೂ ಮತ್ತು ಎಲ್ಲಾ ಬಗೆಯ ಸುಖಗಳನ್ನು ಕೊಡುವಂಥವುಗಳೂ ಆಗಿವೆ.

**ಸ್ವಾತ್ಮತತ್ವವಿದಃ ಸಾಧೋಃ ಪಾಪಹರ್ತುಃ ಕೃಪಾನಿಧೇಃ ।**
**ಪಂಚೇಂದ್ರಿಯನಿರೋಧೋ ಹಿ ಗುಣಃ ಸಂವರ್ಣ್ಯತೇಽಧುನಾ ॥೧೭೩**

ಅರ್ಥ—ಯಾವ ಸಾಧುಗಳು ನಿಜಾತ್ಮತತ್ವವನ್ನು ತಿಳಿಯುವವರಾಗಿಯೂ ಪಾಪಗಳನ್ನು ನಾಶಮಾಡುವವರಾಗಿಯೂ, ಕೃಪೆಗೆ ಸಮುದ್ರದಂತಿರುವವರಾಗಿಯೂ, ಆಗಿರುವರು. ಈಗ ಅವರ ಪಂಚೇಂದ್ರಿಯನಿರೋಧವೆಂಬ ಗುಣಗಳ ಸ್ವರೂಪವನ್ನು ವರ್ಣನೆ ಮಾಡಲಾಗುತ್ತದೆ.

**ಶೀತೋಷ್ಣಕರ್ಕಶಾದಿಭ್ಯೋ ವಸ್ತುಭ್ಯೋ ಯೋ ನ ರುಷ್ಯತಿ ।**
**ಶೀತೋಷ್ಣಾದಿಬಹಿರ್ಭೂತೇ ಸ್ಥಿರಃ ಸ್ವಾತ್ಮನಿ ನೌಮಿ ತಂ ॥ ೧೭೪ ॥**

ಅರ್ಥ—ಯಾವ ಸಾಧುಗಳು ಶೀತ, ಉಷ್ಣ, ಕಠಿಣ, ಮೊದಲಾದ ದುಃಖಗಳನ್ನುಂಟುಮಾಡುವ ವಸ್ತುಗಳಿಂದ ಎಂದೂ ರುಷ್ಟರಾಗುವುದಿಲ್ಲ,

ಅವುಗಳಿಂದ ಬೇರೆಯಾದ ನಿಜಾತ್ಮನಲ್ಲಿ ಯಾವಾಗಲೂ ಸ್ಥಿರವಾಗಿರುತ್ತಾರೆ, ಅವರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಮೊದಲನೆಯ ಸ್ಪರ್ಶನೇಂದ್ರಿಯನಿರೋಧವು.

**ದಧಿದುಗ್ಧಘೃತಾದಿಭ್ಯೋ ವಿರಕ್ತಃ ಸತ್ಸುಖಪ್ರದೇ**
**ಸ್ವರಸೇ ಯಃ ಸ್ಥಿರೇ ತೃಪ್ತ। ಸದಾ ತಂ ಸ್ತೌಮಿ ಕಾಮದಂ ॥೧೭॥**

ಅರ್ಥ—ಯಾವ ಸಾಧುಗಳು ನಾಲಿಗೆಗೆ ಸುಖವನ್ನು ಕೊಡುವ ಅಂದರೆ ರುಚಿ ಕೊಡುವ ಮೊಸರು, ಹಾಲು, ತುಪ್ಪ, ಮಿಠಾಯಿ ಮೊದಲಾದ ವಸ್ತುಗಳನ್ನು ತೊರೆದವರಾಗಿರುತ್ತಾರೆ, ತನ್ನ ನಿಜಾತ್ಮರಸದಲ್ಲಿ ಸ್ಥಿರವಾಗಿರುತ್ತಾರೆ. ಮತ್ತು ಎಲ್ಲಾ ಜೀವಗಳಿಗೂ ಸುಖವನ್ನುಂಟು ಮಾಡುವವರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ೨ ನೇ ಜಿಹ್ವೇಂದ್ರಿಯನಿರೋಧವು.

**ಯಃ ಸುಗಂಧಾಚ್ಚ ದುರ್ಗಂಧಾದ್ವಿರಕ್ತಃ ಪರವಸ್ತುನಃ ।**
**ಲೀನಃ ಸ್ವಾತ್ಮಸುಗಂಧೇ ಚ ವಂದೇ ತಂ ಕಾಮದಂ ಮುನಿಂ ॥೧೭೬॥**

ಅರ್ಥ—ಯಾವ ಸಾಧುಗಳು ಸುಗಂಧ ಮತ್ತು ದುರ್ಗಂಧವಸ್ತುಗಳಿಂದ ಯಾವಾಗಲೂ ವಿರಕ್ತರಾಗಿರುತ್ತಾರೆ. ಅದರ ಬದಲಿಗೆ ಪರಿಶುದ್ಧವಾದ ನಿಜಾತ್ಮರಸವೆಂಬ ಸುಗಂಧದಲ್ಲಿ ಯಾವಾಗಲೂ ತಲ್ಲೀನರಾಗಿರುತ್ತಾರೆ, ಅವರು ಸಂಸಾರಿಜೀವಿಗಳ ಮನೋವಾಂಛೆಯನ್ನು ಪೂರ್ಣಮಾಡತಕ್ಕವರಾಗಿರುತ್ತಾರೆ, ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಮೂರನೇ ಘ್ರಾಣೇಂದ್ರಿಯನಿರೋಧವು.

**ಜೀವಾಜೀವಾದಿವಸ್ತೂನಾಂ ರೂಪಂ ವೀಕ್ಷ್ಯ ಪ್ರಿಯಾಪ್ರಿಯಂ ।**
**ನ ಕ್ರುಧ್ಯನ್ ಸ್ವರಸೇ ಲೀನಸ್ತಿಷ್ಠತ್ಯಾತ್ಮನಿ ನೌಮಿ ತಂ ॥ ೧೭೭ ॥**

ಅರ್ಥ—ಯಾವ ಸಾಧುಗಳು ಜೀವ ಮತ್ತು ಅಜೀವ ಮೊದಲಾದ ವಸ್ತುಗಳ ಪ್ರಿಯವೂ ಮತ್ತು ಅಪ್ರಿಯವೂ ಆದ ಸ್ವರೂಪವನ್ನು ನೋಡಿ ಎಂದೂ ಕುಪಿತರಾಗುವುದಿಲ್ಲ. ಅದರ ಬದಲಿಗೆ ನಿಜಾತ್ಮರಸಾನುಭವದಲ್ಲಿ ತಲ್ಲೀನರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ನಾಲ್ಕನೇ ಚಕ್ಷುರಿಂದ್ರಿಯನಿರೋಧವು.

**ಜೀವಾದಿವಸ್ತುನಃ ಶ್ರುತ್ವಾ ಪಂಚಮಾದಿಸ್ವರಂ ಪ್ರಿಯಂ ।**
**ಸ್ವಭಾವಾಚ್ಚಲಿತೋ ನ ಸ್ಯಾದ್ಯಃ ಸಾಧುರ್ನೌಮಿ ತಂ ಮುದಾ ॥**

ಅರ್ಥ—ಯಾವ ಸಾಧುಗಳು ಜೀವ ಅಜೀವಗಳ ಪಂಚಮ ಮೊದಲಾದ ಮಧುರ ಸ್ವರಗಳನ್ನು ಕೇಳಿ ನಿಜಾತ್ಮಸ್ವರೂಪದಿಂದ ಎಂದೂ ಚಲಿತರಾಗುವುದಿಲ್ಲವೋ, ಆದರ ಬದಲಿಗೆ ನಿಜಾತ್ಮಸ್ವರೂಪದಲ್ಲಿಯೇ ಮಗ್ನರಾಗಿರುತ್ತಾರೆ. ಅವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಐದನೇ ಕರ್ಣೇಂದ್ರಿಯ ನಿರೋಧವು.

**ಸಾಧೋಃ ಸ್ವರ್ಮೋಕ್ಷದಾತುರ್ಹಿ ಮುಕ್ತಿಭರ್ತುಃ ಕ್ಷಮಾನಿಧೇಃ ।**
**ಅಕ್ಷರೋಧಗುಣಾಃ ಪಂಚ ಪ್ರೋಕ್ತಾ ಮಂದಧಿಯಾ ಮಯಾ ॥**

ಅರ್ಥ–ಯಾವ ಸಾಧುಗಳು ಸ್ವರ್ಗಮೋಕ್ಷವನ್ನು ಕೊಡುವವರೋ, ಹಾಗೇನೆಯೇ ಮೋಕ್ಷಲಕ್ಷ್ಮಿಯ ಒಡೆಯರು, ಕ್ಷಮಾಶೀಲರು, ಅಂತಹ ಸಾಧುಗಳ ಪಂಚೇಂದ್ರಿಯನಿರೋಧವೆಂಬ ಐದು ಗುಣಗಳನ್ನು ಮಂದಬುದ್ಧಿಯುಳ್ಳ ನಾನು ವರ್ಣನೆ ಮಾಡಿರುವೆನು.

**ಕ್ಲೇಶಹರ್ತುರ್ದಯಾಮೂರ್ತೇಃ ಶಾಂತಿದಾತುಃ ಕ್ಷಮಾನಿಧೇಃ ।**
**ಷಡಾವಶ್ಯಕಾನಿ ವರ್ಣ್ಯಂತೇ ಗುಣಾಃ ಸಾಧೋಃ ಸುಖಂಕರಾಃ ॥**

ಅರ್ಥ—ಸಾಧುಪರಮೇಷ್ಠಿಗಳು ಸಂಸಾರದ ಸಮಸ್ತ ಸಂತಾಪಗಳನ್ನು ದೂರಮಾಡುವವರು, ದಯಾಮೂರ್ತಿಗಳು, ಎಲ್ಲಾ ಜೀವಗಳಿಗೂ ಶಾಂತಿದಾಯಕರು, ಕ್ಷಮಾನಿಧಿಗಳು. ಅಂತಹ ಸಾಧುಗಳ ಸಮಸ್ತಜೀವಗಳ ಕಲ್ಯಾಣಕಾರಿಗಳಾದ ಷಡಾವಶ್ಯಕಕ್ರಿಯೆಗಳನ್ನು ವರ್ಣಿಸುವೆನು.

**ಆತ್ಮಬಾಹ್ಯೇ ಪದಾರ್ಥೇ ಯೋ ನಿತ್ಯೇಽನಿತ್ಯೇ ಪ್ರಿಯೇಽಪ್ರಿಯೇ ।**
**ಸಾಮ್ಯಂ ದೃಷ್ಟ್ವಾ ಸ್ಥಿತೋ ಹ್ಯಾಸೀಚ್ಚಿದಾನಂದೇ ಹಿ ನೌಮಿ ತಂ ॥**

ಅರ್ಥ—ಯಾವ ಸಾಧುಗಳು ತನ್ನ ನಿಜಾತ್ಮನಿಂದ ಬೇರೆಯಾದ ನಿತ್ಯವೂ, ಅನಿತ್ಯವೂ, ಪ್ರಿಯವೂ, ಅಪ್ರಿಯವೂ ಅದ ಎಲ್ಲಾ ವಸ್ತುಗಳಲ್ಲಿ ಸಮತಾಭಾವವನ್ನು ಧರಿಸಿ, ಚಿದಾನಂದಮಯವಾದ ನಿಜಾತ್ಮನಲ್ಲಿ ತಲ್ಲೀನರಾಗಿ ಸ್ಥಿರವಾಗಿರುತ್ತಾರೆ. ಅಂತಹ ಸಾಧುಗಳಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಸಮತಾಭಾವವೆಂಬ ಮೊದಲನೇ ಆವಶ್ಯಕಕ್ರಿಯೆಯು.

ಅರ್ಹತ್ಸಿದ್ಧಾದಿಪೂಜ್ಯಾನಾಂ ತ್ರಿಕಾಲೇ ಭಕ್ತಿವಂದನಾಂ ।
ಕುರ್ವನ್ನೋ ನಿಜರಾಜ್ಯೇಽಭೂತ್ ಸ್ಥಿರಸ್ತಂ ನೌಮಿ ಮೋಕ್ಷದಂ ॥

ಅರ್ಥ—ಯಾವ ಸಾಧುಗಳು ಅರಹಂತರ ಅಥವಾ ಸಿದ್ಧರ ಅಥವಾ ಪೂಜ್ಯಪುರುಷರ ಭಕ್ತಿ ವಂದನೆಗಳನ್ನು ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ತ್ರಿಕಾಲಗಳಲ್ಲಿ ಮಾಡುವಂತವರಾಗಿ ನಿಜಾತ್ಮರಾಜ್ಯದಲ್ಲಿ ಯಾವಾಗಲೂ ಸ್ಥಿರರಾಗಿರುತ್ತಾರೋ, ಬೇರೆ ಭವ್ಯಜೀವಗಳಿಗೆ ಮೋಕ್ಷದಾಯಕರಾಗಿರುವರೋ ಅಂತಹ ಸಾಧುಗಳಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ವಂದನೆ ಎಂಬ ೨ ನೇ ಆವಶ್ಯಕಕ್ರಿಯೆಯು.

ವೃಷಭಾದಿಜಿನಾನಾಂ ಯೋ ಕುರ್ವನ್ ಗುಣಸ್ತವಾದಿಕಂ ।
ಮನೋವಾಕ್ಕಾಯಶುಧ್ಯಾ ಯಃ ಸ್ತೌಮಿ ತಂ ತೃಪ್ತಮಾತ್ಮನಿ ॥

ಅರ್ಥ—ಸಾಧುಗಳು ಮನ-ವಚನಕಾಯಗಳೆಂಬ ತ್ರಿಕರಣಶುದ್ಧರಾಗಿ ವೃಷಭಾದಿ ತೀರ್ಥಂಕರರುಗಳ ಸ್ತುತಿಯನ್ನು ಮಾಡುವವರಾಗಿ ನಿಜಾತ್ಮನಲ್ಲಿ ಯಾವಾಗಲೂ ಸಂತುಷ್ಟರಾಗಿರುತ್ತಾರೆಯೋ ಅಂತಹ ಸಾಧುಗಳನ್ನು ನಾನು ಸ್ತುತಿಸುವೆನು. ಇದು ಸ್ತುತಿ ಎಂಬ ಮೂರನೇ ಆವಶ್ಯಕಕ್ರಿಯೆಯು.

ದ್ರವ್ಯಕ್ಷೇತ್ರಾದಿಭಾವೇಷು ಕೃತದೋಷಾದಿವರ್ಜನಂ ।
ಯಃ ಪ್ರತಿಕ್ರಮಣಂ ಕುರ್ವನ್ ಸ್ವಂ ವೇತ್ತಿ ಸ್ತೌಮಿ ತಂ ಮುದಾ ॥

ಅರ್ಥ—ಯಾವ ಸಾಧುಗಳು ದ್ರವ್ಯ–ಕ್ಷೇತ್ರ–ಕಾಲ ಭಾವಗಳ ಮೂಲಕ ಸ್ವಯಂ ಮಾಡಿದ ಮತ್ತು ಮಾಡಿಸಿರುವ ದೋಷಗಳನ್ನು ದೂರ ಮಾಡುವ ಪ್ರತಿಕ್ರಮಣೆಯನ್ನು ಮಾಡುವವರಾಗಿ ತನ್ನಾತ್ಮಸ್ವರೂಪವನ್ನು ಚೆನ್ನಾಗಿ ತಿಳಿಯುತ್ತಾರೆಯೋ ಅಂತಹ ಸಾಧುಗಳ ಸ್ತುತಿಯನ್ನು ನಾನು ಸಂತೋಷದಿಂದ ಮಾಡುತ್ತೇನೆ. ಇದು ಸ್ತುತಿ ಎಂಬ ನಾಲ್ಕನೇ ಆವಶ್ಯಕಕ್ರಿಯೆಯು.

ಸಾವದ್ಯದ್ರವ್ಯಭಾವಾನಾಂ ಪ್ರತ್ಯಾಖ್ಯಾನಂ ವಿಧಾಯ ಯಃ ।
ನಿರವದ್ಯೇಷು ಭಾವೇಷು ಯತತೇ ನೌಮಿ ತಂ ಸ್ಥಿರಂ ॥ ೧೮೫ ॥

ಅರ್ಥ—ಯಾವ ಸಾಧುಪರಮೇಷ್ಠಿಗಳು ಸದೋಷವಾದ ದ್ರವ್ಯ–ಕ್ಷೇತ್ರ-ಕಾಲ—ಭಾವಗಳ ಪ್ರತ್ಯಾಖ್ಯಾನ ಅರ್ಥಾತ್ ತ್ಯಾಗವಾಡಿ

ನಿರ್ದೋಷಗಳಾದ ದ್ರವ್ಯ ಕ್ಷೇತ್ರಾದಿಗಳಲ್ಲಿ ಸ್ಥಿರವಾಗುವುದಕ್ಕೆ ಯಾವಾಗಲೂ ಪ್ರಯತ್ನಿಸುತ್ತಿರುತ್ತಾರೆ. ಮತ್ತು ನಿಜಾತ್ಮನಲ್ಲಿ ಸ್ಥಿರವಾಗಿರುತ್ತಾರೆ. ಅಂತಹ ಸಾಧುಗಳಿಗೆ ನಾನು ನಮಸ್ಕಾರ ಮಾಡುತ್ತೇನೆ. ಇದು ಪ್ರತ್ಯಾಖ್ಯಾನವೆಂಬ ಐದನೇ ಅವಶ್ಯಕಕ್ರಿಯೆಯು.

**ಸ್ವಾತ್ಮಾ ಚಿನ್ಮಯಮಾತ್ರೋऽಸ್ತಿ ಮಮ ಜ್ಞಾತ್ವೇತಿ ಚಿಹ್ನತಃ ।**
**ತನ್ವಾದೌ ನಿರ್ಮಮಃ ಸನ್ ಯೋ ಲೀನಃ ಸ್ವಾತ್ಮನಿ ನೌಮಿ ತಂ ॥**

ಅರ್ಥ—ಯಾವ ಸಾಧುಗಳು ತನ್ನ ಆತ್ಮಚಿಹ್ನೆಯಿಂದ ತನ್ನಾತ್ಮನನ್ನು ಕೇವಲ ಚೈತನ್ಯ (ಜ್ಞಾನದರ್ಶನಮಯ) ಸ್ವರೂಪಿ ಎಂದು ತಿಳಿದು ತನ್ನ ಶರೀರದಿಂದ ಮಮತ್ವಬುದ್ಧಿಯನ್ನು ಸರ್ವಥಾ ತೊರೆದು ಬಿಡುತ್ತಾರೆ, ಮತ್ತು ನಿಜಾತ್ಮನಲ್ಲಿ ನಿರಂತರ ಲೀನರಾಗಿರುತ್ತಾರೆ. ಅಂತಹ ಸಾಧುಗಳಿಗೆ ನಾನು ನಮಸ್ಕರಿಸುವೆನು. ಇದು ವ್ಯುತ್ಸರ್ಗವೆಂಬ ಆರನೇ ಆವಶ್ಯಕ ಕ್ರಿಯೆಯು.

**ಸಂಸಾರನಾಶಕಸ್ಯೇತಿ ಸ್ವರ್ಗಮೋಕ್ಷಪ್ರದಾಯಿನಃ ।**
**ಕ್ಷಮಾಸಿಂಧೋರ್ಮುನೇಃ ಪ್ರೋಕ್ತಾ ಯೇ ಷಡಾವಶ್ಯಕಾಗುಣಾಃ ॥**

ಅರ್ಥ—ಯಾವ ಸಾಧುಗಳು ಜನ್ಮಮರಣರೂಪವಾದ ಸಂಸಾರವನ್ನು ನಾಶಮಾಡುವವರಾಗಿಯೂ, ಸ್ವರ್ಗ–ಮೋಕ್ಷಸುಖಗಳನ್ನು ಕೊಡುವವರಾಗಿಯೂ, ಕ್ಷಮಾಸಿಧಿಗಳಾಗಿಯೂ, ಇರುವರೋ ಅವರಿಂದ ಪಾಲಿಸ್ಪಡುವ ಆರು ಆವಶ್ಯಕಕ್ರಿಯೆಗಳ ವರ್ಣನೆಯನ್ನು ಮಾಡಿರುವೆನು.

**ಲೋಚಾದಯೋऽಥ ವರ್ಣ್ಯಂತೇ ಗುಣಾಃ ಸಪ್ತ ಮಹಾಮುನೇಃ ।**
**ಕ್ಷಮಾಸಿಂಧೋರ್ಹಿ ಭವ್ಯಾನಾಮಜ್ಞಾನಾಂಧವಿನಾಶಿನಃ ॥ ೧೮೮ ॥**

ಯಾವ ಸಾಧುಗಳು ಕ್ಷಮಾಗುಣಕ್ಕೆ ಸಮುದ್ರದಂತಿರುವವರೂ, ಭವ್ಯಜೀವಗಳ ಅಜ್ಞಾನವೆಂಬ ಅಂಧಕಾರವನ್ನು ದೂರಗೊಳಿಸುವವರೂ ಆಗಿರುವರೋ ಅಂತಹ ಮಹಾಮುನಿಗಳ ಕೇಶಲೋಚ ಮೊದಲಾದ ಏಳು ಗುಣಗಳ ವರ್ಣನೆಯನ್ನು ಈ ಕೆಳಗಿನಂತೆ ಮಾಡಲಾಗುತ್ತದೆ.

**ಲೋಚಂ ದ್ವಿತ್ರಿಚತುರ್ಮಾಸ್ಯೈಃ ಕುರ್ವನ್ನುಪವಸನ್ಮುನಿಃ ।**
**ನಿರಕ್ತೀಭೂಯ ತನ್ವಾದೌ ಲೀನಃ ಸ್ವಾತ್ಮನಿ ನೌಮಿ ತಂ ॥ ೧೮೯ ॥**

ಅರ್ಥ—ಯಾವ ಮಹಾಮುನಿಗಳಾದ ಸಾಧುಗಳು ತನ್ನ ಶರೀರ ದಿಂದ ವಿರಕ್ತರಾಗಿ ಎರಡುತಿಂಗಳು, ಮೂರು ತಿಂಗಳು ಅಥವಾ ನಾಲ್ಕು ತಿಂಗಳುಗಳಲ್ಲಿ ತನ್ನ ತಲೆಯ ಕೇಶಲೋಚವನ್ನು ಮಾಡಿಬಿಡುತ್ತಾರೆ. ಕೇಶಲೋಚಮಾಡುವ ದಿವಸದಲ್ಲಿ ಉಪವಾಸಮಾಡುತ್ತಾರೆ. ನಿಜಾತ್ಮನಲ್ಲಿ ಮಗ್ನರಾಗಿರುತ್ತಾರೆ. ಅಂತಹ ಸಾಧುಗಳಿಗೆ ನಾನು ನಮಸ್ಕರಿಸುವೆನು. ಇದು ಕೇಶಲೋಚವೆಂಬ ಗುಣವು.

ಬಾಹ್ಯವಸ್ತ್ರಾದಿಭಿರ್ಮುಕ್ತಂ ಜಿನಲಿಂಗಂ ಸುನಿರ್ಮಲಂ ।
ಸ್ವರ್ಮೋಕ್ಷಸಾಧಕಂ ಧೃತ್ವಾ ನಿಜೇ ಯೋ ನೌಮಿ ತಂ ಸ್ಥಿರಂ ॥

ಅರ್ಥ—ಈ ಜಿನಲಿಂಗ ಅಥವಾ ದಿಗಂಬರತ್ವ ಅವಸ್ಥೆಯು ಹೊರ ಗಿನ ವಸ್ತ್ರಾದಿಗಳಿಂದ ದೂರವಾಗಿರುವುದು. ಅತ್ಯಂತ ಪವಿತ್ರವಾದುದು. ಅದರಿಂದ ಸ್ವರ್ಗ-ಮೋಕ್ಷಗಳು ಸಿದ್ಧಿಯಾಗುವವು. ಇಂತಹ ಕಠಿಣವಾದ ದಿಗಂಬರತ್ವವನ್ನು ಧಾರಣೆ ಮಾಡುವ ಸಾಧುಗಳು ಯಾವಾಗಲೂ ನಿಜಾ ತ್ಮನಲ್ಲಿ ಸ್ಥಿರವಾಗಿರುವರು. ಇದು ದಿಗಂಬರತ್ವವೆಂಬ ಗುಣವು.

ಮಮಾತ್ಮಾ ಜ್ಞಾನವೈರಾಗ್ಯಜಲೇನೈವ ಹಿ ಶುದ್ಧ್ಯತಿ ।
ಜ್ಞಾತ್ವೇತಿ ತ್ಯಕ್ತ್ವಾ ಜಲಸ್ನಾನಂ ಜ್ಞಾನೇ ಯೋ ನೌಮಿ ತಂ ಸ್ಥಿರಂ॥

ಅರ್ಥ—ಈ ನನ್ನ ಆತ್ಮನು ಜ್ಞಾನ ಮತ್ತು ವೈರಾಗ್ಯವೆಂಬ ಜಲ ದಿಂದಲೇ ಶುದ್ಧನಾಗಬಲ್ಲನು. ಬೇರೆ ಯಾವುದರಿಂದಲೂ ಶುದ್ಧನಾಗಲಾ ರನು. ಇದನ್ನೇ ತಿಳಿದು ಮಹಾಮುನಿಗಳು ಜಲಸ್ನಾನವನ್ನು ತೊರೆದು ಬಿಡುತ್ತಾರೆ. ಮತ್ತು ನಿಜಾತ್ಮನಲ್ಲಿ ನಿಮಗ್ನರಾಗಿರುತ್ತಾರೆ. ಅಂತಹ ಸಾಧು ಗಳಿಗೆ ನಾನು ನಮಸ್ಕರಿಸುವೆನು.

ತೃಣಕಂಟಕಭೂಮ್ಯಾದೌ ಶಯನಂ ಕುರುತೇ ಹಿ ಯಃ ।
ಕರ್ಮ ಜೇತುಂ ವಿರಕ್ತಃ ಸನ್ ಜಾಗ್ರಂಶ್ಚಾತ್ಮನಿ ನೌಮಿ ತಂ ॥೯೨

ಅರ್ಥ—ಯಾವ ಸಾಧುಗಳು ಕಠಿಣಕರ್ಮಗಳನ್ನು ಜಯಿಸಲು ಶರೀರದ ಮೋಹದಿಂದ ವಿರಕ್ತರಾಗಿ, ಹುಲ್ಲು ಅಥವಾ ಮುಳ್ಳು ಮೊದ ಲಾದವುಗಳಿಂದ ಕೂಡಿದ ಭೂಮಿಯಲ್ಲಿಯೇ ಯಾವಾಗಲೂ ಮಲಗು ತ್ತಾರೆ. ನಿಜಾತ್ಮನ ಅನುಭವದಲ್ಲಿ ಯಾವಾಗಲೂ ಸಾವಧಾನರಾಗಿರುತ್ತಾರೆ.

ಅಂತಹ ಸಾಧುಗಳಿಗೆ ನಾನು ನಮಸ್ಕರಿಸುವೆನು. ಇದು ಭೂಮಿಶಯನ ವೆಂಬ ಮೂಲಗುಣವು.

**ದಂತಾದಿಘರ್ಷಣಂ ತ್ಯಕ್ತ್ವಾ ಕರಾಂಗುಲ್ಯಾ ಹಿ ನಿಸ್ಪೃಹಃ ।**
**ಸ್ವಾತ್ಮಾನುಭವಸಂಪನ್ನಸ್ತೃಪ್ತೋ ಯೋ ನೌಮಿ ತಂ ನಿಜೇ ॥೧೯॥**

ಅರ್ಥ—ಯಾವ ಸಾಧುಗಳು ಸ್ವಕೀಯಶರೀರದಿಂದ ನಿಸ್ಪೃಹರಾಗಿ ಕೈಯ ಬೆರಳುಗಳಿಂದಲೂ ಹಲ್ಲನ್ನುಜ್ಜುವುದಿಲ್ಲ. ನಿರಂತರ ಸ್ವಾನುಭವಾ ನಂದದಲ್ಲಿ ಸಂತುಷ್ಟರಾಗಿರುತ್ತಾರೆ. ಅಂತಹವರಿಗೆ ನಾನು ನಮಸ್ಕರಿಸು ವೆನು. ಇದು ಅದಂತಧಾವನವೆಂಬ ಗುಣವು.

**ಶುದ್ಧೇ ಸ್ಥಾನತ್ರಿಕೇ ಕುರ್ವನ್ ಧ್ಯಾನಾರ್ಥಂ ಸ್ಥಿತಿಭೋಜನಂ ।**
**ಸ್ಥಿತ್ವಾ ಹಸ್ತಪುಟೆ ಯೋ ಹಿ ಲೀನಃ ಸ್ವಾತ್ಮನಿ ನೌಮಿ ತಂ ॥ ೧೮ ॥**

ಅರ್ಥ—ಯಾವ ಸಾಧುಗಳು ತನ್ನ ಧ್ಯಾನದಲ್ಲಿ ನಿಮಗ್ನರಾಗಿರಲು ಬ್ರಾಹ್ಮಣ–ಕ್ಷತ್ರಿಯ–ವೈಶ್ಯರೆಂಬ ಈ ಮೂರು ಶುದ್ಧವರ್ಣದವರಲ್ಲಿಯೇ ನಿಂತು ಹಸ್ತವೆಂಬ ಪಾತ್ರದಲ್ಲಿಯೇ ಆಹಾರಗ್ರಹಣೆ ಮಾಡುತ್ತಾರೆಯೋ ಮತ್ತು ತನ್ನ ವಿಶುದ್ಧಾತ್ಮನಲ್ಲಿ ಮಗ್ನರಾಗಿರುತ್ತಾರೋ ಅಂತಹ ಸಾಧುಗ ಳಿಗೆ ನಾನು ನಮಸ್ಕರಿಸುವೆನು. ಇದು ನಿಂತುಕೊಂಡು ಆಹಾರ ಸೇವಿಸು ವಿಕೆಯೆಂಬ ಗುಣವು.

**ಕುರ್ವನ್ ಯಥೋಕ್ತಕಾಲೇ ಯ ಏಕಭುಕ್ತಿಂ ವಿರಾಗವಾನ್ ।**
**ಸಮ್ಯಗ್ಜ್ಞಾನಾದಿವೃದ್ಧ್ಯರ್ಥಂ ತೃಪ್ತಃ ಸ್ವಾತ್ಮನಿ ನೌಮಿ ತಂ ॥೧೫॥**

ಅರ್ಥ—ಯಾವ ಸಾಧುಗಳು ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗ ಳೆಂಬ ರತ್ನತ್ರಯಗಳ ವೃದ್ಧಿಗಾಗಿ, ಸಂಸಾರ–ಶರೀರ–ಭೋಗಗಳಿಂದ ವಿರ ಕ್ತರಾಗಿ ಶಾಸ್ತ್ರದಲ್ಲಿ ಹೇಳಿರುವ ಸಮಯಾನುಸಾರ ಪ್ರತ್ಯೇಕ ದಿನದಲ್ಲಿ ಒಂದು ವೇಳೆ ಆಹಾರ ಸೇವಿಸುತ್ತಾರೆ. ಮತ್ತು ನಿಜಾತ್ಮನಲ್ಲಿ ಮಗ್ನರಾಗಿರು ತ್ತಾರೆ. ಅಂತಹವರಿಗೆ ನಾನು ನಮಸ್ಕಾರಮಾಡುತ್ತೇನೆ. ಇದು ಒಮ್ಮೆ ಆಹಾರ ಸೇವಿಸುವಿಕೆಯೆಂಬ ಗುಣವು.

**ಸಾಧೋರ್ಮೂಲಗುಣಾಃ ಪ್ರೋಕ್ತಾ ಅಷ್ಟಾವಿಂಶತಿಸಂಖ್ಯಕಾಃ ।**
**ಸ್ವರ್ಮೋಕ್ಷೈಹೇತವೋ ಹ್ಯೇತೇ ಕ್ರೋಧಲೋಭಾದಿನಾಶಕಾಃ ॥**

ಅರ್ಥ—ಈ ಪ್ರಕಾರ ನಾನು ಮಹಾತಪಸ್ವಿಗಳಾದ ಸಾಧುಗಳ ಇಪ್ಪತ್ತೆಂಟು ಮೂಲಗುಣಗಳ ವರ್ಣನೆಯನ್ನು ಮಾಡಿದೆನು. ಇವೆಲ್ಲಾ ಮೂಲಗುಣಗಳು ಸ್ವರ್ಗ-ಮೋಕ್ಷಸುಖಗಳಿಗೆ ಕಾರಣಭೂತನಾದವುಗಳು. ಮತ್ತು ಕ್ರೋಧಾದಿ ಎಲ್ಲಾ ಬಗೆಯ ಕಷಾಯಗಳನ್ನು ನಾಶಮಾಡತಕ್ಕವುಗಳು.



# ಅಥ ಪ್ರಶಸ್ತಿಃ

ಪ್ರಸಿದ್ಧೇ ಮೂಲಸಂಘೇಽಸ್ಮಿನ್ ಶುದ್ಧೇ ಸೇನಾನ್ವಯೇ ವರೇ ।
ಗಚ್ಛೇ ಪುಷ್ಕರಕೇ ಜಾತೋ ಜಿನಸೇನೋ ಮಹಾಕವಿಃ ॥ ೧ ॥
ದೇವೇಂದ್ರಕೀರ್ತಿಃ ಸಂಜಾತಸ್ತಸ್ಯ ಶಿಷ್ಯಾನ್ವಯೇ ಶುಭೇ ।
ಧರ್ಮಸ್ಯ ನೇತಾ ತಚ್ಛಿಷ್ಯಃ ಸೂರಿಃ ಶ್ರೀಶಾಂತಿಸಾಗರಃ ॥ ೨ ॥

ಭಾವಾರ್ಥ—ಈ ಪ್ರಖ್ಯಾತ ಮೂಲಸಂಘದ ಸೇನಗಣ ಮತ್ತು ಪುಷ್ಕರಗಚ್ಛದಲ್ಲಿ ಜಿನಸೇನರೆಂಬ ಪ್ರಸಿದ್ಧ ಆಚಾರ್ಯರೂ ಮಹಾಕವಿಗಳೂ ಆಗಿರುವರು. ಆ ಆಚಾರ್ಯಜಿನಸೇನರ ಶಿಷ್ಯಪರಂಪರೆಯಲ್ಲಿ ದೇವೇಂದ್ರಕೀರ್ತಿಗಳೆಂಬ ಮುನಿಗಳಾದರು. ಆ ದೇವೇಂದ್ರಕೀರ್ತಿಗಳ ಶಿಷ್ಯರೂ ಧರ್ಮಧುರೀಣರೂ ( ಧರ್ಮನಾಯಕರೂ ) ಶ್ರೀ ಶಾಂತಿಸಾಗರರೆಂಬ ಆಚಾರ್ಯರಾದರು.

ಆಸೀದಯಂ ಮಹಾಸೂರಿರ್ಭೋಜಗ್ರಾಮನಿವಾಸಿನಃ ।
ಭೀಮಗೌಡಸ್ಯ ಸತ್ಯಾಯಾಃ ಸುಪುತ್ರಃ ಸಾತಗೌಡಕಃ ॥ ೩ ॥
ಮುನಿದೀಕ್ಷಾಂ ಸಮಾದಾಯ ಪ್ರಾಪ್ತಃ ಸೂರಿಪದಂ ಕ್ರಮಾತ್ ।
ಮಮ ದೀಕ್ಷಾಗುರುಃ ಸೋಽಯಂ ಜೀಯಾದಾಚಂದ್ರತಾರಕಂ ॥೪॥

ಭಾವಾರ್ಥ—ಈ ಆಚಾರ್ಯಶಾಂತಿಸಾಗರರು ಭೋಜಗ್ರಾಮ ( ಬೆಳಗಾಂ ಜಿಲ್ಲೆ ) ದಲ್ಲಿರುವ ಶ್ರೀ ಭೀಮಗೌಡ ಪಾಟೀಲರ ಸುಪುತ್ರರಾಗಿರುವರು. ಅವರ ಪೂರ್ವಗೃಹಸ್ಥಾವಸ್ಥೆಯ ಹೆಸರು ಸಾತಗೌಡರೆಂದು ಆಗಿತ್ತು. ಅವರ ತಾಯಿಯ ಹೆಸರು ಸತ್ಯವತೀ ಎಂದಾಗಿತ್ತು. ಸಾತಗೌಡರು ಮುನಿದೀಕ್ಷೆಯನ್ನು ಗ್ರಹಿಸಿ ಕ್ರಮವಾಗಿ ಆಚಾರ್ಯಪದವನ್ನು ಹೊಂದಿದರು. ಈ ಆಚಾರ್ಯಶ್ರೀಯವರೇ ನನ್ನ ದೀಕ್ಷಾಗುರುಗಳು. ನನ್ನ ದೀಕ್ಷಾಗುರುಗಳಾದ ಆಚಾರ್ಯ ಶಾಂತಿಸಾಗರರು ಈ ಭೂಮಂಡಲದಲ್ಲಿ ಎಂದಿನ ತನಕ ಚಂದ್ರಸೂರ್ಯ ಮತ್ತು ನಕ್ಷತ್ರಮಂಡಲಗಳಿರುವವೋ ಅಂದಿನ ತನಕ ಜೀವಂತರಾಗಿರಲಿ.

**ಮುಮುಕ್ಷುರಸ್ಯ ಶಿಷ್ಯೋಽಹಂ ಮುನಿಃ ಶ್ರೀಕುಂಥುಸಾಗರಃ |**
**ಅನ್ಯೇ ಚ ಬಹವಃ ಶಿಷ್ಯಾಃ ಸಂಜಾತಾಸ್ತಸ್ಯ ಯೋಗಿನಃ || [illegible] ||**

ಭಾವಾರ್ಥ—ಮೋಕ್ಷವನ್ನು ಪಡೆಯಲಿಚ್ಛಿಸುವ ನಾನು ಈ ಶ್ರೀ ಶಾಂತಿಸಾಗರರ ಶಿಷ್ಯನಾಗಿರುವೆನು. ಈ ಆಚಾರ್ಯರ ಶಿಷ್ಯರು ಇನ್ನೂ ಅನೇಕಜನರಿದ್ದಾರೆ.

**ಶ್ರೀವೀರಸಾಗರೋ ವಿದ್ವಾನ್ ಗುಣಜ್ಞೌ ನೇಮಿಸಾಗರೌ |**
**ಶ್ರೀಚಂದ್ರಸಾಗರೋ ಯೋಗೀ ದಯಾಲುಃ ಪಾಯಸಾಗರಃ || ೬ ||**
**ನಮಿಸಾಗರಯೋಗೀಶೋ ಮುಮುಕ್ಷುರಾದಿಸಾಗರಃ |**
**ಸ್ಮೃತೇರ್ವಕ್ತಾ ತಪಸ್ವೀ ಚ ಮುನಿಃ ಸುಧರ್ಮಸಾಗರಃ || ೭ ||**

ಭಾವಾರ್ಥ—ವಿದ್ವಾಂಸರಾದ ವೀರಸಾಗರರೂ, ಅನೇಕ ಗುಣಧಾರಿಗಳಾದ ಇಬ್ಬರು ನೇಮಿಸಾಗರರೂ, ಯೋಗಿಮುಖ್ಯರಾದ ಚಂದ್ರಸಾಗರರೂ, ದಯಾಸಮುದ್ರರಾದ ಪಾಯಸಾಗರರೂ, ಯೋಗಿಗಳ ಒಡೆಯರಾದ ನಮಿಸಾಗರರೂ, ನಿರ್ವಾಣವಾಂಛಕರಾದ ಆದಿಸಾಗರರೂ, ಸಂಹಿತೆ ಗ್ರಂಥಗಳನ್ನು ತಿಳಿಯತಕ್ಕವರೂ, ನಿಪುಣ ವಕ್ತೃತ್ವಶಾಲಿಗಳೂ, ಪರಮ ತಪಸ್ವಿಗಳೂ, ಮುನಿಗಳೂ ಆದ ಸುಧರ್ಮಸಾಗರರು ಮೊದಲಾದವರು ಆಚಾರ್ಯ ಶಾಂತಿಸಾಗರರ ಶಿಷ್ಯರೇ ಆಗಿರುವರು.

**ಮಧ್ಯಭಾರತದೇಶಸ್ಥಚಾವಲೀಗ್ರಾಮವಾಸಿನಃ |**
**ತೋತಾರಾಮಸ್ಯ ಮೇವಾಯಾ ಧರ್ಮಜ್ಞೋ ವರನಂದನಃ || ೮ ||**
**ವಿದ್ವಾನ್ ನಂದನಲಾಲೋಽಯಂ ಮುನಿರ್ಭೂತ್ವಾ ಸುಧರ್ಮಧೀಃ |**
**ಸುಧರ್ಮಸಾಗರೋ ಜಾತಃ ಸೂರಿಕಲ್ಪಃ ಪ್ರಸಾರಕಃ || ೯ ||**
**ಸುಧರ್ಮಧ್ಯಾನದೀಪಾದಿಶಾಸ್ತ್ರಾಣಾಂ ಮೂಲಕಾರಕಃ |**
**ಸುಧರ್ಮಸಾಗರಃ ಸೋಽಯಂ ಜೀಯಾದ್ವಿದ್ಯಾಗುರುರ್ಮಮ ||೧೦||**

ಭಾವಾರ್ಥ—ಮಧ್ಯಭಾರತದಲ್ಲಿರುವ ಚಾವಲೀಗ್ರಾಮನಿವಾಸಿಗಳಾದ ತೋತಾರಾಮರೂ ಮತ್ತು ಅವರ ಧರ್ಮಪತ್ನಿಗಳಾದ ಶ್ರೀಮತಿ ಮೇವಾಬಾಯಿಯವರಿಗೆ ಜನಿಸಿದ ಧರ್ಮಾತ್ಮರಾದ ಸತ್ಪುತ್ರರು ನಂದನಲಾಲರು ಆಗಿದ್ದರು. ಅವರು ವಿದ್ವಾಂಸರಾಗಿಯೇ ಇದ್ದುದಲ್ಲದೆ ಸದ್ಬುದ್ಧಿಧಾ

ರಿಗಳೂ ಆಗಿದ್ದರು. ಇವರೇ ದೀಕ್ಷೆತೆಗೆದುಕೊಂಡು ಸುಧರ್ಮಸಾಗರರೆಂದು ಪ್ರಖ್ಯಾತರಾದರು. ಅವರು ಆಚಾರ್ಯರಿಗೆ ಸಮಾನರಾಗಿ ಎಲ್ಲರಿಗೂ ಅಧ್ಯಾಪನಮಾಡಿಸುತ್ತಿದ್ದರು. ಅವರು ನನ್ನ ವಿದ್ಯಾಗುರುಗಳು. ಇಂತಹ ಸುಧರ್ಮಸಾಗರರ ಧವಲಕೀರ್ತಿಯು ನಿರಂತರ ಚಿರಂಜೀವಿಯಾಗಿರಲಿ !

**ಐನಾಪುರಸ್ಥ ಸಾತಪ್ಪಾಸರಸ್ವತ್ಯೋಃ ಸುತೋತ್ತಮಃ ।**
**ರಾಮಚಂದ್ರಃ ಸುದೀಕ್ಷಿತ್ವಾ ಜಾತೋಽಹಂ ಕುಂಥುಸಾಗರಃ ॥೧೧॥**

ಭಾವಾರ್ಥ—ಐನಾಪುರ ( ಬೆಳಗಾಂವ ಜಿಲ್ಲೆಯಲ್ಲಿರುವ ) ದಲ್ಲಿರುವ ಸಾತಪ್ಪ ಮತ್ತು ಸರಸ್ವತಿಯರೆಂಬ ದಂಪತಿಗಳ ಸುಪುತ್ರನಾದ ರಾಮಚಂದ್ರನು ಮುನಿದೀಕ್ಷೆಯನ್ನು ತೆಗೆದುಕೊಂಡು ನಾನು ಕುಂಥುಸಾಗರ ಮುನಿಯಾಗಿರುವೆನು.

**ಉದಗೀರಪುರೇ ಶ್ರೇಷ್ಠೀ ಗಂಗಾಸಾನಾಮಕೋಽಭವತ್ ।**
**ತದ್ಭಾರ್ಯಾ ರುಕ್ಮಿಣೀ ಜ್ಞೇಯಾ ರಾಮಚಂದ್ರಃ ಸುತಸ್ತಯೋಃ ॥**
**ಸೂರೇರಾಜ್ಞಾಂ ಸಮಾದಾಯ ಮಯೈವ ಕುಂಥುಸಿಂಧುನಾ ।**
**ದೀಕ್ಷಿತಃ ಸೋಽಪಿ ಭವ್ಯಾತ್ಮಾ ವಿದ್ವಾನ್ ಸುಮತಿಸಾಗರಃ ॥ ೧೩ ॥**

ಭಾವಾರ್ಥ—ಉದಗೀರ ನಗರದಲ್ಲಿ ಗಂಗಾಸಾರೆಂಬ ಶ್ರೇಷ್ಠಿಗಳೊಬ್ಬರು ಇದ್ದಾರೆ. ಅವರ ಧರ್ಮಪತ್ನಿಯ ಹೆಸರು ರುಕ್ಮಿಣಿ ಎಂದಾಗಿದೆ. ಅವರೀರ್ವರದಂಪತಿಯರಿಗೆ ರಾಮಚಂದ್ರನೆಂಬ ಪುತ್ರನಿದ್ದನು. ಕುಂಥುಸಾಗರಮುನಿಯಾದ ನಾನು ಆಚಾರ್ಯ ಶ್ರೀಶಾಂತಿಸಾಗರರ ಆಜ್ಞೆ ಪಡೆದು ಆ ಭವ್ಯ ಮತ್ತು ಪಂಡಿತರಾದ ರಾಮಚಂದ್ರರಿಗೆ ದೀಕ್ಷೆ ಕೊಟ್ಟು ಸುಮತಿಸಾಗರರೆಂಬ ಶುಭನಾಮ ಇಡಲಾಯಿತು.

**ಚತುರ್ವಿಂಶತಿತೀರ್ಥೇಶಸ್ತುತಿಃ ಪಂಚಗುರುಸ್ತುತಿಃ ।**
**ಚಾರಿತ್ರಂ ಶಾಂತಿಸಿಂಧೋಶ್ಚ ಭಾವನಾ ರಚಿತಾ ಮಯಾ ॥ ೧೪ ॥**

ಭಾವಾರ್ಥ—ನನ್ನಿಂದ ಇಂದಿನವರೆಗೆ ಚತುರ್ವಿಂಶತಿತೀರ್ಥಂಕರಸ್ತುತಿ, ಪಂಚಪರಮೇಷ್ಠಿಸ್ತುತಿ, ಆಚಾರ್ಯ ಶ್ರೀಶಾಂತಿಸಾಗರಚರಿತ್ರೆ, ಮತ್ತು ಆತ್ಮಭಾವನಾ ಮೊದಲಾದ ಗ್ರಂಥಗಳ ರಚನೆ ಮಾಡಲಾಯಿತು.

ದೀಕ್ಷಾಗುರೋರೇವ ಚ ಶಾಂತಿಸಿಂಧೋಃ
ಸಂಸಾರಹರ್ತುಃ ಶಿವಸೌಖ್ಯದಾತುಃ ॥
ಕೃಪಾಪ್ರಸಾದಾದ್ಧಿ ಸುಧರ್ಮನಾಮ್ನೋ।
ವಿದ್ಯಾಗುರೋರೇವ ದಯಾರ್ದ್ರಮೂರ್ತೇಃ ॥ ೧೫ ॥

ಶ್ರೀಕುಂಥುನಾಮ್ನಾ ಮುನಿನಾ ಸ್ವಬುದ್ಧ್ಯಾ
ಸ್ವಜನ್ಮಮೃತ್ಯೋಶ್ಚ ವಿನಾಶಹೇತೋಃ ।
ತಥಾ ಪರೇಷಾಂ ಸುಖಶಾಂತಿಹೇತೋ-
ರ್ಯಥಾರ್ಥಧರ್ಮಸ್ಯ ಚ ಬೋಧಹೇತೋಃ ॥ ೧೬ ॥
ನಾಮ್ನಾ ಹಿ ಬೋಧಾಮೃತಸಾರ ಏವ
ಗ್ರಂಥಸ್ತೃತೀಯೋ ರಚಿತಶ್ಚ ಭಕ್ತ್ಯಾ ।
ಅಜ್ಞಾನಹರ್ತಾ ನಿಜಬೋಧಕರ್ತಾ
ಭೇತ್ತಾ ಧ್ರುವಂ ಕ್ರೋಧಚತುಷ್ಟಯಸ್ಯ ॥ ೧೭ ॥

ಭಾವಾರ್ಥ—ಜನ್ಮಮರಣರೂಪವಾದ ಸಂಸಾರವನ್ನು ನಾಶಮಾಡತಕ್ಕವರೂ ಮೋಕ್ಷಸುಖವನ್ನು ಕೊಡತಕ್ಕವರೂ ಆದ ಶ್ರೀಶಾಂತಿಸಾಗರರು ನನ್ನ ದೀಕ್ಷಾಗುರುಗಳು. ಹಾಗೇನೆಯೇ ದಯಾಮೂರ್ತಿಗಳಾದ ಸುಧರ್ಮಸಾಗರರು ನನ್ನ ವಿದ್ಯಾಗುರುಗಳು. ಈ ಗುರುಗಳಿಬ್ಬರ ಕೃಪಾಪ್ರಸಾದದಿಂದ ಕುಂಥುಸಾಗರಮುನಿಯಾದ ನಾನು ನನ್ನ ಜನ್ಮಮರಣಗಳನ್ನು ನಾಶಮಾಡುವದಕ್ಕಾಗಿಯೂ, ಬೇರೆ ಭವ್ಯಜೀವಗಳಿಗೆ ಸುಖಶಾಂತಿಗಳುಂಟಾಗುವುದಕ್ಕಾಗಿಯೂ, ಯಥಾರ್ಥಧರ್ಮದ ಜ್ಞಾನಪ್ರಚಾರಕ್ಕಾಗಿಯೂ ಬೋಧಾಮೃತಸಾರವೆಂಬ ಮೂರನೆಯ ಗ್ರಂಥವನ್ನು ನನ್ನ ಬುದ್ಧಿಗನುಸಾರವಾಗಿ ಮಾಡಿರುವೆನು. ಆ ಗ್ರಂಥವು ಬಹಳ ಮನೋಹರವಾಗಿದೆ. ಅಜ್ಞಾನವನ್ನು ಹೋಗಲಾಡಿಸುತ್ತದೆ. ನಿಜವಾದ ಆತ್ಮಜ್ಞಾನವನ್ನುಂಟುಮಾಡುತ್ತದೆ. ಕ್ರೋಧಾದಿಕಷಾಯಗಳನ್ನು ನಾಶಮಾಡುತ್ತದೆ. ಮತ್ತು ಈ ಗ್ರಂಥವನ್ನು ನಾನು ಭಕ್ತಿಪೂರ್ವಕ ಮಾಡಿರುವೆನು.

ಛಂದೋಽಲಂಕಾರಶಾಸ್ತ್ರೇ ವಾ ನ ಚ ಕಾವ್ಯಕಲಾದಿಕಂ ।
ನೈವ ನೀತ್ಯಾದಿಶಾಸ್ತ್ರಂ ಚ ನ್ಯಾಯವ್ಯಾಕರಣಾದಿಕಂ ॥ ೧೮ ॥

**ವಿಶೇಷಂ ಧರ್ಮಶಾಸ್ತ್ರಂ ವಾ ನೈವ ಜಾನಾಮಿ ತತ್ವತಃ ।**
**ತಥಾಪಿ ಕೇವಲಂ ಭಕ್ತ್ಯಾ ಲಿಖಿತೋಽಯಂ ಮಯಾಽಧುನಾ ॥೧೯॥**

ಭಾವಾರ್ಥ—ನನಗೆ ಛಂದಶ್ಶಾಸ್ತ್ರವೂ, ಅಲಂಕಾರವೂ, ಕಾವ್ಯಕಲೆಗಳೂ ಗೊತ್ತಿಲ್ಲ. ನೀತಿಶಾಸ್ತ್ರವೂ, ನ್ಯಾಯವ್ಯಾಕರಣಶಾಸ್ತ್ರಗಳೂ ಗೊತ್ತಿಲ್ಲ. ಯಥಾರ್ಥವಾಗಿ ನೋಡಿದರೆ ವಿಶೇಷರೂಪದಿಂದ ಧರ್ಮಶಾಸ್ತ್ರವನ್ನೂ ನಾನರಿಯೆ. ಹೀಗಿದ್ದರೂ ಕೇವಲ ಭಕ್ತಿಪೂರ್ವಕ ಈಗ ಈ ಗ್ರಂಥವನ್ನು ನಾನು ಮಾಡಿರುವೆನು.

**ನ ಕೃತಂ ಖ್ಯಾತಿಪೂಜಾರ್ಥಂ ನಾಹಂಕಾರಧಿಯಾ ಮಯಾ ।**
**ಕೇವಲಂ ಭವ್ಯಜೀವಾನಾಂ ಭವದುಃಖಪ್ರಶಾಂತಯೇ ॥ ೨೦ ॥**
**ಶಾಶ್ವತಸ್ಯ ಸುಖಸ್ಯಾರ್ಥಂ ಸ್ವಾದಾರ್ಥಂ ಸ್ವಸುಖಸ್ಯ ವಾ ।**
**ಸ್ವರ್ಮೋಕ್ಷದಾಯಕಂ ಹೃದ್ಯಂ ಸ್ತುತ್ಯಂ ಸ್ವಪರಬೋಧಕಂ ॥೨೧॥**
**ವಾಂಛಿತಾರ್ಥಪ್ರದಂ ಪೂತಂ ರೋಗಶೋಕಾರ್ತಿನಾಶಕಂ ।**
**ಪರಮೇಷ್ಠಿನಾಂ ಗುಣಾನಾಂ ವಾ ಪಂಚಾನಾಂ ಪರಿವರ್ಣನಂ ॥೨೨॥**
**ಮನೋವಾಕ್ಕಾಯಸಂಶುದ್ಧ್ಯಾ ಭಕ್ತಿಭಾವವಶೇನ ಹಿ ।**
**ವಿಹಿತಂ ಸರ್ವಶಾಂತ್ಯರ್ಥಂ ಮಂಗಲಾರ್ಥಂ ಚ ಸರ್ವದಾ ॥ ೨೩ ॥**

ಭಾವಾರ್ಥ—ಈ ಮೋಕ್ಷಮಾರ್ಗಪ್ರದೀಪವೆಂಬ ಗ್ರಂಥದಲ್ಲಿ ಯಾವ ಪಂಚಪರಮೇಷ್ಠಿಗಳ ವರ್ಣನೆಯನ್ನು ನಾನು ಮಾಡಿರುವೆನೋ ಅದು ನನ್ನ ಖ್ಯಾತಿಗಾಗಿಯೂ, ಅಥವಾ ಪ್ರತಿಷ್ಠೆಗಾಗಿಯೂ ಮಾಡಲಿಲ್ಲ. ಹಾಗೇನೆಂಬೋ ನನ್ನ ದರ್ಪವನ್ನು ತೋರಿಸಲಿಕ್ಕೂ ಮಾಡಲಿಲ್ಲ. ಆದರೆ ಮಾತ್ರ ಭವ್ಯಜೀವಗಳ ಸಂಸಾರದ ದುಃಖಗಳನ್ನು ದೂರಮಾಡಲು ಇದನ್ನು ಮಾಡಲಾಗಿದೆ. ಅಥವಾ ಅಕ್ಷಯಾನಂದಸ್ವರೂಪವಾದ ಮೋಕ್ಷಸುಖವನ್ನು ಪಡೆಯಲೂ, ಆತ್ಮಜನ್ಯ ಆನಂದರಸವನ್ನನುಭವಿಸಲೂ, ಎಲ್ಲಾ ಜೀವರುಗಳಿಗೆ ಶಾಂತಿಯುಂಟಾಗಲೂ ಮತ್ತು ನಿರಂತರ ಕಲ್ಯಾಣವಾಗಲೂ, ನನ್ನ ಭಕ್ತಿಭಾವಗಳ ವಶನಾಗಿಯೂ, ಮತ್ತು ಮನ-ವಚನ-ಕಾಯಗಳ ಪರಿಶುದ್ಧತೆಯಿಂದ ಈ ಗ್ರಂಥದಲ್ಲಿ ಪಂಚಪರಮೇಷ್ಠಿಗಳ ಗುಣಗಳನ್ನು ವರ್ಣಿಸಿರುವೆನು. ಈ ವರ್ಣನೆಯು ಸ್ವರ್ಗಮೋಕ್ಷವನ್ನು ಕೊಡು

ವಂತಹುದು. ಮನೋಹರವಾದುದು. ಪ್ರಶಂಸನೀಯವಾದುದು. ಸ್ವಪರ ಭೇದಜ್ಞಾನವುಂಟಾಗುವುದಕ್ಕೆ ಕಾರಣವಾದುದು. ನಿಜಾತ್ಮ ಮತ್ತು ಪರ ವಸ್ತುಗಳ ಸ್ವರೂಪಜ್ಞಾನವನ್ನು ತಿಳಿಸುವಂತಹುದು. ಇಚ್ಛಿತ ಫಲವನ್ನು ಕೊಡುವುದು, ಪವಿತ್ರವಾದುದು. ರೋಗ-ಶೋಕ-ಆಧಿ-ವ್ಯಾಧಿ ಮತ್ತು ಉಪಾಧಿಗಳನ್ನು ನಾಶಮಾಡುವುದು.

**ಶೀಘ್ರಂ ತ್ಯಕ್ತ್ವಾ ಪ್ರಮಾದಂ ಹಿ ಮನೋವಾಕ್ಕಾಯಶುದ್ಧಿತಃ ।**
**ಪಠಂತು ಪಾಠಯಂತ್ವನ್ಯಾನ್ ಭವ್ಯಾನ್ ಗ್ರಂಥಮಿಮಂ ಸದಾ ॥೨೪॥**
**ಅನುಭವಂತಿ ಯೇ ಭವ್ಯಾ ಭಕ್ತ್ಯಾನುಭಾವಯಂತಿ ಯೇ ।**
**ನಮಂತಿ ನಾಮಯಂತೀತಿ ಪಠಂತಿ ಪಾಠಯಂತಿ [illegible] ॥ ೨೫ ॥**
**ಸ್ಮರಂತಿ ಸ್ಮಾರಯಂತೀತಿ ಶೃಣ್ವಂತಿ ಶ್ರಾವಯಂತಿ ತೇ ।**
**ಸಂಸಾರಸಾರಸೌಖ್ಯಂ ಹಿ ಭುಕ್ತ್ವಾ ನಿತ್ಯಂ ಮನೋಹರಂ ॥ ೨೬ ॥**
**ಸಂಸಾರದುಃಖತೋ ದೂರೀಭೂತ್ವಾ ಜನ್ಮಜರಾಂತಕಂ ।**
**ಸ್ವರ್ಗೋಕ್ಷೌ ಕ್ರಮತೋ ಧೀರಾ ಲಭಂತೇ ಸ್ವಾತ್ಮಸಾಧಕಾಃ ॥೨೭॥**

ಭಾವಾರ್ಥ—ಎಲೇ ಭವ್ಯಜೀವಗಳೇ! ಬೇಗನೇ ಅಲಸ್ಯವನ್ನೀಗ ಬಿಟ್ಟು, ಮನ-ವಚನ-ಕಾಯಗಳ ಪರಿಶುದ್ಧಿಪೂರ್ವಕವಾಗಿ ಇದನ್ನು ಓದಿರಿ, ಮತ್ತು ಬೇರೆ ಧರ್ಮಾತ್ಮರಾದ ಭವ್ಯಜೀವಗಳಿಗೆ ಓದಿಸಿರಿ. ಯಾವ ಭವ್ಯಜೀವರು ಈ ಗ್ರಂಥದ ಪರಿಶೀಲನೆ ಮಾಡುವರೋ ಮತ್ತು ಬೇರೆಯವರಿಗೆ ಮಾಡಿಸುವರೋ, ಇದಕ್ಕೆ ತಾನಾಗಿಯೇ ನಮಸ್ಕಾರ ಮಾಡುತ್ತಾರೋ, ಬೇರೆಯವರಿಂದ ಮಾಡಿಸುತ್ತಾರೋ ಸ್ವಯಂ ಸ್ಮರಿಸುತ್ತಾರೋ ಮತ್ತು ಬೇರೆಯವರಿಂದ ಸ್ಮರಣೆ ಮಾಡಿಸುತ್ತಾರೋ, ತಾನಾಗಿ ಕೇಳುತ್ತಾರೋ, ಬೇರೆ ಜೀವರುಗಳಿಗೆ ಕೇಳಿಸುತ್ತಾರೋ, ಅವರು ನಿಜಾತ್ಮನನ್ನು ಸಿದ್ಧಮಾಡುವ ಧೀರರೂ, ವೀರರೂ, ಭವ್ಯಪುರುಷರೂ ನಿರಂತರ ಸುಂದರವಾಗಿ ತೋರುವ ಸಂಸಾರದಲ್ಲಿ ಸಾರಭೂತವಾಗಿರುವ ಇಂದ್ರ, ಚಕ್ರವರ್ತಿ ಮೊದಲಾದ ಸುಖಗಳನ್ನನುಭವಿಸುತ್ತಾ ಜನ್ಮ-ಜರಾ-ಮರಣರೂಪವಾದ ಈ ಸಂಸಾರದುಃಖಗಳನ್ನು ನಾಶಮಾಡುತ್ತಾರೆ, ಹಾಗೇನೆಯೇ ಕ್ರಮವಾಗಿ ಸ್ವರ್ಗ ಮತ್ತು ಮೋಕ್ಷಗಳನ್ನು ಹೊಂದುತ್ತಾರೆ.

ಸುದ್ವಿಷಷ್ಟ್ಯಧಿಕೇ ಪೂತೇ ಚತುರ್ವಿಂಶತಿಕೇ ಶತೇ ।
ವರ್ಷೇ ವೀರಪ್ರಭೋರ್ಮಾಸೇ ಜ್ಯೇಷ್ಠೇ ಸ್ವರ್ಮೋಕ್ಷದಾಯಿನಃ ॥
ಪಕ್ಷೇಽಸಿತತ್ರಯೋದಶ್ಯಾಂ ಸುಂದರೇ ಸೋಮವಾಸರೇ ।
ಹಿಮ್ಮತ್ಸಿಂಹನರೇಶಸ್ಯ ನ್ಯಾಯನೀತಿದಯಾಯುಜಃ ॥ ೨೯ ॥
ಶ್ರೇಷ್ಠರತ್ನಧನಾಕೀರ್ಣೇ ಹಿಮ್ಮತೇ ನಗರೇ ವರೇ ।
ಧ್ವಜಾದಿಭೂಷಿತೇ ಸ್ಥಿತ್ವಾ ಶ್ರೀಚಂದ್ರಪ್ರಭುಮಂದಿರೇ ॥ ೩೦ ॥
ಮೋಕ್ಷಮಾರ್ಗಪ್ರದೀಪೋಽಯಂ ಗ್ರಂಥಃ ಸ್ವರ್ಮೋಕ್ಷಸೌಖ್ಯದಃ ।
ಲಿಖಿತೋ ಭವ್ಯಬೋಧಾರ್ಥಂ ಭವಾಗ್ನೇಃ ಶಾಂತಿಹೇತವೇ ॥೩೧॥
ಸ್ವಾನಂದಸ್ವಾದತುಷ್ಟೇನ ದಿಗಂಬರಸುಲಿಂಗಿನಾ ।
ಶಾಂತಿಸಾಗರಶಿಷ್ಯೇಣ ಕುಂಥುಸಾಗರಯೋಗಿನಾ ॥ ೩೨ ॥
ಕೃತಾ ಜಯಪುರೇ ಭಾಷಾ ನಾನೂಲಾಲೇನ ಶಾಸ್ತ್ರಿಣಾ ।
ಇಷ್ಟಾ ಚ ಮಂಗಲಕರೀ ಭಾದ್ರಮಾಸೇ ಗುರೌ ದಿನೇ ॥ ೩೩ ॥
ಶುಕ್ಲಪಕ್ಷಸ್ಯ ಪಂಚಮ್ಯಾಂ ಚತುರ್ನವತಿ ಸಂಯುತೇ ।
ಏಕೋನವಿಂಶತಿಶತೇ ಶಕೇ ಶ್ರೀವಿಕ್ರಮಸ್ಯ ವೈ ॥ ೩೪ ॥

ಚಿಂತಾಮಣೇಃ ಕಲ್ಪತರೋಃ ಸಮಾನಂ ।
ಸುಖಪ್ರದಂ ವಾಂಛಿತದಂ ಯಥೇಷ್ಟಂ ॥
ಗ್ರಂಥಂ ಹ್ಯಮುಂ ಧ್ವಾಂತಹರಂ ಸಮೂಲಾ-
ತ್ಸುಬೋಧದಂ ಮೋಕ್ಷಪದಪ್ರದಂ ವೈ ॥ ೩೫ ॥
ಸ್ಮರಂತಿ ಗಾಯಂತಿ ಪಠಂತಿ ಭಕ್ತ್ಯಾ,
ತೇ ಏವ ಭವ್ಯಾಶ್ಚ ನರಾಮರತ್ವಂ ।
ಲಬ್ಧ್ವಾ ಲಭಂತೇ ಸುಖದಂ ಸುಧರ್ಮಂ,
ಕ್ರಮಾತ್ತಥಾ ಶಾಶ್ವತಿಕಂ ಸ್ವರಾಜ್ಯಂ ॥ ೩೬ ॥

ಭಾವಾರ್ಥ—ಸ್ವರ್ಗ-ಮೋಕ್ಷಗಳನ್ನು ಕೊಡುವ ಶ್ರೀ ಮಹಾವೀರ ಸ್ವಾಮಿಗಳು ಮೋಕ್ಷ ಸಂದಿ ೨೪೬೨ ನೇ ವರ್ಷದ ಜ್ಯೇಷ್ಠ ಕೃಷ್ಣಪಕ್ಷದ ತ್ರಯೋದಶೀ ಸೋಮವಾರದ ಶುಭದಿನದಲ್ಲಿ ನ್ಯಾಯ-ನೀತಿ-ದಯೆಗಳೆಂಬ ಗುಣಗಳಿಂದ ಕೂಡಿದ ಶ್ರೀ ಹಿಮ್ಮತಸಿಂಹರಾಜರ ರತ್ನೈಶ್ವರ್ಯಾದಿಗ

ಳಿಂದ ಪರಿಪೂರ್ಣವಾದ ಉತ್ತಮ ಹಿಮ್ಮತನಗರದಲ್ಲಿ (ಗುಜರಾಥ ದೇಶ) ರುವ ಅನೇಕ ಬಗೆಯ ಧ್ವಜಪತಾಕೆಗಳಿಂದ ಮನೋಹರವಾಗಿ ಶೋಭಿಸುವ ಶ್ರೀ ಚಂದ್ರಪ್ರಭುಚೈತ್ಯಾಲಯದಲ್ಲಿದ್ದು, ಆತ್ಮಾನಂದರಸದಲ್ಲಿ ನಿಮಗ್ನರಾದ ಆಚಾರ್ಯ ಶಾಂತಿಸಾಗರರ ಶಿಷ್ಯನೂ ದಿಗಂಬರಲಿಂಗಧಾರಿಯೂದ ಯೋಗಿಯೂ ಆದ ನಾನು ಕುಂಥುಸಾಗರನು ಸಂಸಾರವೆಂಬ ಕಾಡ್ಗಿಚ್ಚಿನ ಶಾಂತಿಗೋಸ್ಕರನಾಗಿಯೂ, ಭವ್ಯಜೀವರುಗಳಿಗೆ ಆತ್ಮಜ್ಞಾನದ ಲಾಭಕ್ಕೋಸ್ಕರವಾಗಿಯೂ, ಸ್ವರ್ಗಮೋಕ್ಷವನ್ನು ಕೊಡುವುದರಲ್ಲಿ ಸಮರ್ಥವಾಗಿರುವ ಈ ಮೋಕ್ಷಮಾರ್ಗಪ್ರದೀಪವೆಂಬ ಗ್ರಂಥವನ್ನು ಮಾಡಿರುವೆನು. ಈ ಗ್ರಂಥದ ಹಿತಕಾರಿಯೂ ಮಂಗಲಕಾರಕವೂ ಆದ ಹಿಂದೀ ಟೀಕೆಯು ಜಯಪುರದಲ್ಲಿ ವಿಕ್ರಮಸಂವತ್ಸರ ೧೯೯೪ ನೆಯ ಭಾದ್ರಪದ ಮಾಸದ ಶುದ್ಧ ತ್ರಯೋದಶೀ ಗುರುವಾರ ದಿನದಲ್ಲಿ ಪಂ. ನಾನೂಲಾಲಜೀ ಶಾಸ್ತ್ರಿಗಳಿಂದ ಬರೆಯಲಾಯಿತು. ( ಇದರ ಕನ್ನಡ ಭಾಷಾಂತರವು ವೀರಸಂವತ್ ೨೪೬೭ ನೇ ಆಶ್ವೀಜ ಬಹುಳ ಪಂಚಮಿಯ ದಿನ ಸೋಮವಾರದಲ್ಲಿ ಧರಣೇಂದ್ರಕುಮಾರ ಶಾಸ್ತ್ರೀ ಸಂಪಾದಕ ವೀರವಾಣೀ ಇವರಿಂದ ಮುಂಬಯಿಯಲ್ಲಿ ಮಾಡಲಾಯಿತು. ) ಚಿಂತಾಮಣಿ ಮತ್ತು ಕಲ್ಪವೃಕ್ಷಕ್ಕೆ ಸಮಾನ ಇಚ್ಛಿತಸುಖವನ್ನು ಕೊಡುವ, ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಸುಜ್ಞಾನ ಮತ್ತು ಮೋಕ್ಷವನ್ನು ಕೊಡುವ ಈ ಗ್ರಂಥವನ್ನು ಯಾವ ಭವ್ಯಜೀವರು ಭಕ್ತಿಯಿಂದ ಸ್ಮರಿಸುತ್ತಾರೋ, ಗಾನಮಾಡುತ್ತಾರೋ ಮತ್ತು ಓದುತ್ತಾರೋ ಅವರು ಮನುಷ್ಯ ದೇವಜನ್ಮವನ್ನು ಪಡೆದು, ಸುಖವನ್ನು ಕೊಡುವ ಶ್ರೇಷ್ಠಧರ್ಮವನ್ನು ಪಡೆದು, ಕ್ರಮದಿಂದ ನಾಶರಹಿತವಾದ ಸ್ವರಾಜ್ಯಪದ ( ಮೋಕ್ಷ ) ವನ್ನು ಪಡೆಯುತ್ತಾರೆ.

ಅಜ್ಞಾನಾದ್ವಾ ಪ್ರಮಾದಾದ್ವಾ ಸ್ಖಲನಂ ಯದಿ ಮೇ ಭವೇತ್ ।
ಗ್ರಂಥೇಽಸ್ಮಿನ್ ತದ್ಬುಧಾ ನಿತ್ಯಂ ಶ್ರಮಣಾಃ ಶೋಧಯಂತ್ವಿತಿ ॥೩೭॥

ಭಾವಾರ್ಥ—ನನ್ನ ಅಜ್ಞಾನದಿಂದಾಗಲೀ ಅಥವಾ ಪ್ರಮಾದದಿಂದಾಗಲೀ ಈ ಗ್ರಂಥದಲ್ಲಿ ಏನಾದರೂ ಕಮ್ಮಿ ಮತ್ತು ಮರೆತುಹೋದ ದೋಷಗಳಿದ್ದರೆ ವಿದ್ವಾಂಸರಾದ ಮುನಿಗಳು ಅದನ್ನು ಶುದ್ಧಮಾಡಿಕೊಳ್ಳಬೇಕು.

ಜಯತು ಜಯತು ದೇವಃ ಶಾಂತಿನಾಥೋ ಜಿನೇಂದ್ರಃ ।
ಸುರನರಮುನಿಪೂಜ್ಯೋ ವರ್ಧಮಾನೋ ಜಿನೇಶಃ ॥
ವರಶಿವಸುಖದಾತ್ರೀ ವೀರವಾಣೀ ಸದೈವ ।
ಮಮ ಶುಭಮತಿದಾತಾ ಶಾಂತಿಸಿಂಧುಃ ಸುಧರ್ಮಃ ॥ ೩೮ ॥

ಭಾವಾರ್ಥ—ದೇವಾಧಿದೇವರಾದವರೂ ಭಗವಂತರೂ ಆದ ಶಾಂತಿ ನಾಥಜಿನೇಶ್ವರರು ನಿರಂತರ ಜಯವಂತರಾಗಿರಲಿ. ದೇವತೆಗಳಿಂದಲೂ, ಮನುಷ್ಯರಿಂದಲೂ ಮತ್ತು ಮುನಿಗಳಿಂದಲೂ ಪೂಜಿಸಲ್ಪಡುವ ಮಹಾ ವೀರಸ್ವಾಮಿಯವರು ಜಯವಂತರಾಗಿರಲಿ. ಇದೇರೀತಿಯಾಗಿ ಮೋಕ್ಷಸು ಖವನ್ನು ಕೊಡುವ ಭಗವಂತರಾದ ಮಹಾವೀರಸ್ವಾಮಿಗಳ ಮೃದುಮಧು ರಗಂಭೀರ ದಿವ್ಯಧ್ವನಿಯೆಂಬ ದ್ವಾದಶಾಂಗವಾಣಿಯೂ ಜಯವಂತಳಾಗಿ ರಲಿ. ಮತ್ತು ಎನಗೆ ಸದ್ಬುದ್ಧಿಯನ್ನಿತ್ತ ಆಚಾರ್ಯ ಶ್ರೀಶಾಂತಿಸಾಗರರೂ ಹಾಗೇನೆಯೇ ಸುಧರ್ಮಸಾಗರರೂ ಯಾವಾಗಲೂ ಚಿರಂಜೀವಿಯಾಗಿರಲಿ.

ಈ ಪ್ರಕಾರವಾಗಿ ಪರಮಪೂಜ್ಯ ತಪೋನಿಧಿ ವಿಶ್ವವಂದ್ಯ
ಆಚಾರ್ಯ ಕುಂಥುಸಾಗರಸ್ವಾಮಿಗಳಿಂದ ವಿರಚಿತ
ವಾದ ಈ ಮೋಕ್ಷಮಾರ್ಗಪ್ರದೀಪವೆಂಬ
ಗ್ರಂಥವು ಪೂರ್ಣವಾಯಿತು.

॥ ಸಮಾಪ್ತೋಽಯಂ ಗ್ರಂಥಃ ॥